ವಾಗ್ಭೂಷಣ ಗ್ರಂಥಮಾಲೆ—ನಂ. ೫೯.

# ಕವಿಕಾರ್ಯಪ್ರಶಂಸೆ.

ಮಂ. ಆ. ರಾಮಾನುಜಯ್ಯಂಗಾರ್ಯ. ಕರ್ಣಾಟಕ
ಕಾವ್ಯಕಲಾನಿಧಿಪ್ರವರ್ತಕ, ಮತ್ತು ಕವಿಸಮಯ,
ಪ್ರಮಾಣಪ್ರಮೇಯ ವಿವೇಕ, ಪ್ರಬಂಧಾವಳಿ,
ಸುವ್ರತ ಇತ್ಯಾದ್ಯನೇಕ ಗ್ರಂಥಕರ್ತ;
ಇವರಿಂದ ರಚಿತವಾದುದು.

ಬೆಳಗಾಂವ "ಶ್ರೀಮಹಾವೀರ" ಪ್ರೇಸಿನಲ್ಲಿ
ಮುದ್ರಿತವಾಯಿತು.

1913.



ಕ್ರಯ ೨ ಆಣೆ.

# ಪ್ರವೇಶ.

ಈ ಗ್ರಂಥವಿಷಯವು ಸನ್ ೧೯೧೩ನೆಯ ಜೂನ್ ೧ ರಲ್ಲಿ ಕರ್ಣಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕೋತ್ಸವಕಾಲದಲ್ಲಿ ಧಾರವಾಡದಲ್ಲಿ ವಾಚೋಪನ್ಯಸ್ತವಾಗಿ ಆ ಮೇಲೆ ಸ್ಮೃತಿಯಿಂದ ಸಾಧ್ಯವಾದಮಟ್ಟಿಗೆ ಹೇಳಿದ ಪರಿಪಾಟಿಯಲ್ಲೇ ಅನ್ಯೂನಾತಿರಿಕ್ತವಾಗಿ ಬರೆಯಲ್ಪಟ್ಟುದು.

ಇದು ವಾಚೋಪನ್ಯಸ್ತವಾದ ಗ್ರಂಥವಾದುದರಿಂದ ಶ್ರೋತೃಗಳ ಗಮನವನ್ನು ಹಿಂದೆ ಹೇಳಿದ ವಿಷಯಗಳಕಡೆಗೆ ಪದೇಪದೇ ತರಬೇಕಾಗಿರುವ ಕಾರಣ ಇದರಲ್ಲಿ ಪೌನರುಕ್ತ್ಯವು ಬರಬೇಕಾಗುವುದು. ಈ ವಿಧವಾದ ಪೌನರುಕ್ತ ದೋಷಕ್ಕೂ ಮತ್ತು ಅಜ್ಞಾನಮೂಲಕವಾಗಿ ಸಂಭವಿಸಿರಬಹುದಾದ ಇತರ ದೋಷಗಳಿಗೂ ವಿದ್ವಾಂಸರ ಕ್ಷಮೆಯನ್ನು ಬೇಡುವೆನು.

ಈ ಉಪನ್ಯಾಸವನ್ನು ಮಾಡಲು ಅವಕಾಶವನ್ನು ಕಲ್ಪಿಸಿ ಕೊಟ್ಟು ಅದನ್ನು ಬರೆಯಿಸಿ ಕರ್ಣಾಟಕ ಭಾಷೆಗೆ ಭೂಷಣಪ್ರಾಯವಾಗಿರುವ "ವಾಗ್ಭೂಷಣ" ಮಾಸಪತ್ರಿಕೆಯಲ್ಲಿ ಮುದ್ರಿಸಿ ಪ್ರಚಾರ ಮಾಡಿಸಿದ ಕರ್ಣಾಟಕ ವಿದ್ಯಾವರ್ಧಕ ಸಂಘಕ್ಕೂ ಆ ಸಂಘದ ಕಾರ್ಯನಿರ್ವಾಹಕರಾಗಿ ಸನ್ಮಾನಿತರಾದ ಮ. ರಾ. ಕರಿಗುದರಿಯವರಿಗೂ ಮತ್ತು ಮ. ರಾ. ಮಹಿಷಿಯವರಿಗೂ ಕೃತಜ್ಞತಾಪೂರ್ವಕವಾದ ಸವಿನಯಾಭಿವಂದನವನ್ನು ಅರ್ಪಿಸುವೆನು.

**Mysore**
*August 1913*

**M. A. R.**

ಶ್ರೀರಸ್ತು.

ಶ್ರೀಮತೇ ರಾಮಾನುಜಾಯ ನಮಃ ।

# ಕವಿಕಾರ್ಯಪ್ರಶಂಸೆ.

ಸಭಾಧ್ಯಕ್ಷರೆ, ಸಭಿಕರಿರಾ,

ರಾಮದೇವರು ಚಿತ್ರಕೂಟ ಪರ್ವತದಲ್ಲಿದ್ದಾಗ ಒಂದು ಹುಲ್ಲುಕಡ್ಡಿಯನ್ನು ಬ್ರಹ್ಮಾಸ್ತ್ರಮಾಡಿ, ಅದರ ಮಹಿಮೆಯನ್ನು ನೋಡಲಪೇಕ್ಷಿಸಿದಂತೆ, ಹುಲ್ಲಿಗಿಂತಲೂ ಕೀಳಾದ ನನ್ನಲ್ಲಿ ಇಲ್ಲದೇ ಇದ್ದ ಒಂದು ಮಹಿಮೆಯನ್ನು ಕೂಡಿಸಿ ಅದು ನನ್ನಲ್ಲಿ ಹೇಗೆ ಪ್ರಕಾಶಿಸುವದೆಂದು ನೋಡಬೇಕೆಂಬ ಕುತೂಹಲವುಳ್ಳವರಾಗಿರುವಿರಿ. ಉದಕಸಮೃದ್ಧಿಯನ್ನುಳ್ಳ ಉದಧಿಯು ನಾವು ಕೊಡುವ ಅರ್ಘ್ಯೋದಕದಿಂದ ಹೇಗೆ ಸುಪ್ರೀತನಾಗುವನೋ, ತೇಜೋರಾಶಿಯಾದ ಸೂರ್ಯನು ನಾವು ಬೆಳಗುವ ದೀಪಾರತಿಯಿಂದ ಹೇಗೆ ಪ್ರಸನ್ನನಾಗುವನೋ ಹಾಗೆಯೇ ಕೃಪಾರಸಪೂರ್ಣರಾಗಿಯೂ, ಜ್ಞಾನತೇಜಸ್ಸನ್ನು ಸರ್ವತ್ರ ಎರಚುತ್ತಿರುವರಾಗಿಯೂ ಇರುವ ತಾವೂ ಅಲ್ಪ ಪ್ರಜ್ಞನಾದ ನನ್ನಲ್ಲಿ ಹೊರಡುವ ವಾಕ್ಕಿನಲ್ಲಿ ಪ್ರೀತರಾಗುವಿರಿ. ಮಾತಾಪಿತೃಗಳು ಸುತನ ಮಾತಿನಲ್ಲಿ ದೋಷವನ್ನು ನೋಡದೆ ಅದನ್ನು ಆದರಪೂರ್ವಕವಾಗಿ ಲಾಲಿಸಿ ಹೇಗೆ ಕೇಳುವರೋ ಹಾಗೆ ತಾವು ನನ್ನ ವಾಕ್ಕಿನಲ್ಲಿ ದೋಷಗಳು ಕೋಡಿಹರಿಯುತ್ತಿದ್ದರೂ ಅವೊಂದನ್ನೂ ಲಕ್ಷ್ಯಕ್ಕೆ ತಾರದೆ ಗುಣಗಳನ್ನು ಮಾತ್ರವೆ ಸ್ವೀಕರಿಸುವಿರಿ ಎಂಬುದಕ್ಕೆ ತಮ್ಮ ಈ ಕೃಪಾಗಮನವೇ ಸಾಕಾದ ದೃಷ್ಟಾಂತವು. ತಮ್ಮ ಈ ಕುತೂಹಲವೂ, ಈ ಪ್ರಸನ್ನತೆಯೂ, ಈ ಆದರವೂ, ತಮ್ಮ ಸನ್ನಿಧಿಯಲ್ಲಿ ಉಪನ್ಯಾಸ ಮಾಡಲು ನನಗೆ ಧೈರ್ಯವನ್ನು ಕೊಟ್ಟಿರುವುದು. ಪ್ರಾಜ್ಞರಲ್ಲಿ ವಿಶೇಷ ಹೇಳಬಾರದು. ವಿಷಯವನ್ನು ಅರಂಭಿಸುವೆನು.

"ಸುಖಂ ಮೇ ಭೂಯಾತ್" ಎಂಬ ಇಚ್ಛೆಯೇ ಸಕಲರ ಪ್ರವೃತ್ತಿಗೂ ಕಾರಣವಷ್ಟೆ. ಸುಖವೆಂದರೇನು? ಆ ಸುಖವು ಹೇಗೆ ಉಂಟಾಗುವುದು? ಸುಖ

ವೆಂಬುವದು ಒಂದು ವಿಧವಾದ ಅನುಕೂಲವೃತ್ತಿಯ ಕಾರ್ಯವಾಗಿರುವುದು. ದುಃಖ ವೆಂಬುದು ತದ್ಭಿನ್ನವು; ಎಂದರೆ ವಿರೋಧವೃತ್ತಿಯ ಕಾರ್ಯವಾಗಿರುವುದು. ಎಂದ ಮೇಲೆ ದುಃಖವು ಕೂಡ ಕೆಲವು ವೇಳೆ ತನ್ನ ವೃತ್ತಿದ್ವಾರಾ ಸುಖರೂಪವಾಗಿ ಪರಿ ಣಮಿಸುವುದು. ಅದ್ದರಿಂದ ಸಕಲ ಪ್ರವೃತ್ತಿಗೂ "ಸುಖಂ ಮೇ ಭೂಯಾತ್" ಎಂಧರೆ ಸುಖವು ಉಂಟಾಗಲಿ. ಎಂಬ ಆಶೆಯೇ ಕಾರಣವಾಗಿರುವುದು.

ಆ ಸುಖವು ಹೇಗೆ ಉಂಟಾಗುವುದು? ಅದು ಇಂದ್ರಿಯಗಳ ದ್ವಾರಾ ಉಂಟಾ ಗುವುದು. ಇಂದ್ರಿಯಗಳ ಸಹಾಯದಿಂದಲೇ ಲೋಕದ ಪರಿಚಯವು ಬರಬೇಕು. ಆ ಇಂದ್ರಿಯಗಳಲ್ಲಿ ಜ್ಞಾನೇಂದ್ರಿಯಗಳು ಕರ್ಮೇಂದ್ರಿಯಗಳು ಎಂದು ಎರಡು ದೊಡ್ಡ ವಿಭಾಗವುಂಟು. ಅವುಗಳಲ್ಲಿ ಕರ್ಮೇಂದ್ರಿಯಗಳಿಗಿಂತ ಜ್ಞಾನೇಂದ್ರಿಯ ಗಳು ಪ್ರಬಲವಾದುವು. ಕರ್ಮೇಂದ್ರಿಯಗಳ ಮೂಲಕ ಉಂಟಾಗುವ ಲೋಕ ಪರಿಚಯವೂ ತನ್ಮೂಲಕ ಹುಟ್ಟುವ ಸುಖದುಃಖರೂಪಗಳಾದ ಅನುಭವಗಳೂ, ಜ್ಞಾನೇಂದ್ರಿಯಗಳ ಮೂಲಕ ಉಂಟಾಗುವ ಲೋಕಪರಿಚಯ ತನ್ಮೂಲಕ ಹುಟ್ಟು ವ ಅನುಭವ ಇವುಗಳಿಗಿಂತಲೂ ಬಹಳ ಕಡಿಮೆ. ಆದ್ದರಿಂದ ಇಲ್ಲಿ ಕರ್ಮೇಂದ್ರಿ ಯಗಳ ವಿಚಾರಕ್ಕೆ ಅಷ್ಟು ಹೋಗುವುದಿಲ್ಲ.

ಜ್ಞಾನೇಂದ್ರಿಯಗಳು ಕಣ್ಣು ಮೂಗು, ಕಿವಿ, ನಾಲಿಗೆ, ಚರ್ಮ ಎಂಬ ಹೆಸ ರುಗಳಿಂದ ಪ್ರಸಿದ್ಧವಾಗಿರುವುವು. ನಾವು ಕಣ್ಣಿನಿಂದ ನೋಡುವೆವು; ಕಿವಿಯಿಂದ ಕೇಳುವೆವು; ಮೂಗಿನಿಂದ ವಾಸಿಸುವೆವು. ನಾಲಗೆಯಿಂದ ರುಚಿಸುವೆವು. ಚರ್ಮ ದಿಂದ ಸ್ಪರ್ಶಿಸುವೆವು. ಕಣ್ಣಿನಿಂದ ನಾವು ನೋಡುವೆವು ಎಂದರೆ ವಸ್ತುಗತವಾದ ಬಣ್ಣ-ಆಕಾರಗಳನ್ನು ಪರಿಚಯ ಮಾಡಿ ತಿಳಿಯುವೆವು. ಕಿವಿಯಿಂದ ಕೇಳುವೆವು ಎಂದರೆ ವಸ್ತುಗಳಲ್ಲಿ ಉಂಟಾಗುವ ಸದ್ದುಗಳನ್ನು ಪರಿಚಯಮಾಡಿ ತಿಳಿಯುವೆವು, ಮೂಗಿನಿಂದ ವಾಸಿಸುವೆವು, ಎಂದರೆ ವಸ್ತುಗತವಾದ ಗಂಧಾದಿಗಳನ್ನು ಪರಿಚಯ ಮಾಡಿ ತಿಳಿಯುವೆವು. ನಾಲಗೆಯಿಂಗ ರುಚಿಸುವೆವು. ಎಂದರೆ ವಸ್ತುಗತವಾದ ರಸ ಗಳನ್ನು ಪರಿಚಯಮಾಡಿ ಅರಿಯುವೆವು. ಚರ್ಮದಿಂದ ಸ್ಪರ್ಶಿಸುವೆವು. ಎಂದರೆ ವಸ್ತುಗತವಾದ ಮಾರ್ದವ ಕಾಠಿಣ್ಯ ಎಂಬ ಗುಣಗಳನ್ನು ಪರಿಚಯಮಾಡಿ ಅರಿ ಯುವೆವು. ಎಂದು ಅರ್ಥ. ಹೀಗೆಂದು ಹೇಳಿದ ಮೇಲೆ ಜ್ಞಾನೇಂದ್ರಿಯಗಳ ಸಹಾ ಯದಿಂದ ನಮ್ಮ ಶರೀರಕ್ಕೆ ಸಂಬಂಧಪಟ್ಟ ಮತ್ತು ನಮಗಿಂತ ಹೊರಗಣ ವಸ್ತುಗಳ ಪರಿಚಯವನ್ನು ಎಂದರೆ ಅವುಗಳಲ್ಲಿರುವ ರೂಪ, ರಸ, ಗಂಧ, ಸ್ಪರ್ಶ ಮೊದಲಾದು ವುಗಳನ್ನು ತಿಳಿಯುವೆವೆಂದಾಯಿತು. ಹೀಗಿರಲು ಲೋಕಪರಿಚಯಕ್ಕೆ ಜ್ಞಾನೇಂದ್ರಿ

ಯ ಪಂಚಕದ ಸಹಾಯುವೇಬೇಕು. ಇನ್ನು ಮೇಲೆ ಕರ್ಮೇಂದ್ರಿಯಗಳಲ್ಲಿ ಮುಖ್ಯ ವಾಗಿ ಒಂದೆರಡರಿಂದ ವಸ್ತುಗಳ ಪರಿಮಾಣ, ಗಾತ್ರ, ತೂಕ, ಮೊದಲಾದ ಜ್ಞಾನವು ಉಂಟಾಗುವದು. ಪರಿಮಾಣಾದಿಗಳನ್ನು ತಿಳಿಸುವ ಕರ್ಮೇಂದ್ರಿಯಗಳ ವ್ಯಾಪಾ ರವು ಜ್ಞಾನೇಂದ್ರಿಯಗಳ ವ್ಯಾಪಾರಕಾಲದಲ್ಲಿಯೇ ಉಂಟಾಗುವುದರಿಂದ ಅವುಗಳ ನೈಜಸಾಮರ್ಥ್ಯವು ಜ್ಞಾನೇಂದ್ರಿಯಗಳ ಸಾಮರ್ಥ್ಯದಲ್ಲಿಯೇ ಸೇರಿ ಹೋಗುವುದು. ಅವುಗಳ ವಿವೇಚನೆಯನ್ನು ಬೇರೆ ಮಾಡಬೇಕಾಗಿಲ್ಲ. ಇಂದ್ರಿಯಗಳಿಂದ ಲೋಕಪ ರಿಚಯುವು ಹೇಗೆ ಉಂಟಾಗುವುದು? ಎಂದು ಕೇಳಿದರೆ:—ಆತ್ಮನು ಮನಸ್ಸೆಂಬ ಅಂತರಿಂದ್ರಿಯನ್ನು ಪ್ರೇರಿಸುವನು. ಮನಸ್ಸು ಬಹಿರಿಂದ್ರಿಯಗಳೆನಿಸಿಕೊಂಡ ಜ್ಞಾನೇಂ ದ್ರಿಯಗಳನ್ನು ಪ್ರೇರಿಸುವುದು. ಆ ಪ್ರೇರಣೆಯಿಂದ ಆ ಬಹಿರಿಂದ್ರಿಯಗಳು ವಸ್ತುಗಳ ನ್ನು ಮುಟ್ಟುವುವು. ಆಗ ನಮಗೆ ವಸ್ತುಸಾಕ್ಷಾತ್ಕಾರ ಅಥವಾ ಪರಿಚಯುವು ಉಂಟಾ ಗುವುದು ಎಂದು ನಮ್ಮ ಶಾಸ್ತ್ರಕಾರರು ನಿರೂಪಿಸುವರು. ಈಗಿನ ಪಾಶ್ಚಾತ್ಯಶಾಸ್ತ್ರ ಜ್ಞರಲ್ಲಿ ಕೆಲವರು ನಮ್ಮ ಹಿರಿಯರ ತಾತ್ಪರ್ಯವನ್ನು ತಿಳಿಯದೆ ಅವರ ಮತವನ್ನು ಅಜ್ಞಪ್ರಲಪಿತವೆಂದು ದೂಷಿಸುವರು. ಅವರು ವಸ್ತುಗಳಲ್ಲಿರುವ ಪ್ರತಿಪರಮಾಣುಗ ಳಿಂದ ಹೊರಟ ತೇಜಸ್ಸು, ಧ್ವನಿ, ರಸ, ಇವೇ ಮೊದಲಾದ ಗುಣ ಪರಂಪರೆಗಳು ಬಹಿರಿಂದ್ರಿಯಗಳನ್ನು ಮುಟ್ಟಿ, ಒಳಗೆ ನುಗ್ಗಿ, ತತ್ತದಿಂದ್ರಿಯಗಳ ಭಿತ್ತಿಗಳ ಮೇಲೆ ಒಂದು ವಿಧವಾದ ವಿಚಿತ್ರಸಂಸ್ಕಾರಗಳನ್ನು ಮಾಡುವವು. ಆಯಾ ಸಂಸ್ಕಾರಗಳು ತತ್ತದಿಂದ್ರಿಯಗತವಾದ ಜ್ಞಾನನಾಡಿಗಳ ದ್ವಾರಾ ಮನಸ್ಸಿಗೆ ತಲಪುವುವು. ಆಮೇಲೆ ನಮಗೆ ವಸ್ತುಗಳ ಜ್ಞಾನವುಂಟಾಗುವುದು. ಎಂದು ಹೇಳಿ ಲೋಕದ ವಸ್ತುಗಳಿಂದ ಹೊರಟ ಗುಣಪರಂಪರೆಗಳು ಇಂದ್ರಿಯ ಭಿತ್ತಿಯನ್ನು ಮುಟ್ಟಿ ಮನಸ್ಸಿಗೆ ಸೇರಿದ ಮೇಲೆಯೇ ವಸ್ತುಜ್ಞಾನವುಂಟಾಗಬೇಕೇ ಹೊರತು ಮನಸ್ಸಿನಿಂದ ಪ್ರೇರಿತವಾದ ಇಂದ್ರಿಯಗಳು ವಸ್ತುಗಳನ್ನು ಮುಟ್ಟುವುದರಿಂದ ಉಂಟಾಗುವುದಿಲ್ಲವೆಂದು ನಿರೂಪಿ ಸುವರು. ಇಲ್ಲಿ ನಾವು ಹೇಳುವದೇನಂದರೆ—ವಸ್ತುಗಳಿಂದ ಹೊರಟ ಗುಣಪರಂಪ ರೆಗಳು ಬಹಿರಿಂದ್ರಿಯಗಳನ್ನು ಸ್ಪರ್ಶಿಸುತ್ತಿದ್ದರೂ ಅನೇಕ ವೇಳೆ ವಸ್ತುಜ್ಞಾನವುಂಟಾ ಗುವುದಿಲ್ಲ. ಅನೇಕವೇಳೆ ಗಂಟೆಯ ಸದ್ದು ಕಿವಿಗೆ ಬೀಳುತ್ತಿದ್ದರೂ ತಿಳಿದು ಬರುವುದಿಲ್ಲ. ಅತ್ಯಧಿಕವಾದ ಯೋಚನೆಯಲ್ಲಿದ್ದಾಗ ಸುತ್ತಮುತ್ತಲಿರುವ ಜನಗಳ ಸಲ್ಲಾಪವು ತಿಳಿದು ಬರುವುದಿಲ್ಲ. ಇಂಥವರು ಬಂದಿದ್ದರು, ಇಂಥ ಮಾತಾಡಿದರು, ಎಂದು ಗೊತ್ತಾಗುವುದಿಲ್ಲ. ಹಲವು ವೇಳೆ ಒಂದು ಉಪನ್ಯಾಸವನ್ನೋ ಅಥವಾ

ಗ್ರಂಥ ಲೇಖನವನ್ನೋ ರಚಿಸುತ್ತಿರುವಾಗ ನಮ್ಮ ಕಣ್ಣಿನ ನೋಟವು ಎದರು ಗೋಡೆಯ ಮೇಲೆ ಬಿದ್ದಿದ್ದರೂ ಆ ಗೋಡೆಯ ಮೇಲೆ ಅಡ್ಡಾಡುವ ಹುಳುಗಳೂ, ಅವುಗಳ ವ್ಯಾಪಾರವೂ ಗೊತ್ತಾಗುವುದಿಲ್ಲ. ಸ್ನೇಹಿತರೊಡನೆ ವಿನೋದವಾಗಿ ಮಾತನಾಡುತ್ತ ವಾಯುವನ್ನು ಸೇವಿಸುವ ಉದ್ದೇಶದಿಂದ ಹೊರಗಡೆ ಸಂಚರಿಸುತ್ತಿರುವಾಗ ನಡೆದ ದಾರಿಯೂ, ಆ ದಾರಿಯಲ್ಲಿ ಕಂಡ ವಸ್ತುಗಳೂ, ನಡೆದ ಸಂಗತಿಯೂ ಗೊತ್ತು ಹತ್ತುವುದಿಲ್ಲ. ಹೀಗಾಗುವದಕ್ಕೆ ಕಾರಣವೇನು ? ವಸ್ತುಗತವಾದ ತೇಜಃಪರಂಪರೆಯ ಕಾರ್ಯಗಳು ಬಹಿರಿಂದ್ರಿಯಗಳ ಮೇಲೆ ನಡೆಯುತ್ತಲೇ ಇದ್ದರೂ ವಸ್ತುಜ್ಞಾನವು ಯಥಾವತ್ತಾಗಿ ಉಂಟಾಗುವುದಿಲ್ಲ. ಆದ್ದರಿಂದ ಇಂದ್ರಿಯಗಳಲ್ಲಿ ಉಂಟಾದ ಸಂಸ್ಕಾರಗಳು ಪ್ರಯೋಜನಕಾರಿಗಳಾಗಲಿಲ್ಲ. ಹೀಗಾಗಲು ಕಾರಣವೇನು? ಎಂದು ಕೇಳಿದರೆ ಆಗ ನಮ್ಮ ಮನಸ್ಸು ಬೇರೆ ಕಡೆಗೆ ಇದ್ದಿತು, ಈ ಸಂಸ್ಕಾರಗಳ ಕಡೆ ಇರಲಿಲ್ಲ ಎಂದೇ ಹೇಳಬೇಕು. ಆದ್ದರಿಂದ ಆತ್ಮನು ಮನಸ್ಸನ್ನು ಪ್ರೇರಿಸಿ ಎಂದರೆ—ಆ ಇಂದ್ರಿಯಗಳನ್ನು ವಸ್ತುಗಳ ಮೇಲೆ ಮುಟ್ಟುವಂತೆ ಮಾಡಿ ವಸ್ತುಗಳ ರೂಪಾದಿಗಳ ಪರಿಚಯವನ್ನು ಒಳಕ್ಕೆ ತೆಗೆದುಕೊಂಡ ಮೇಲೆ ವಸ್ತು ಸಾಕ್ಷಾತ್ಕಾರವು ಉಂಟಾಯಿತು. ಎಂದು ಹೇಳಿದಂತಾಯಿತು. ಪಾಶ್ಚಾತ್ಯರು ಹೇಳುವ ವಸ್ತು ಸಾಕ್ಷಾತ್ಕಾರಕ್ಕೆ ಕಾರಣವು ವಸ್ತುಜ್ಞಾನವು ಬಹಿರಿಂದ್ರಿಯದ ಮೂಲಕ ಉಂಟಾಗುವ ಕ್ರಮವನ್ನು ತಿಳಿಸುವ ಪ್ರಕಾರವಾಯಿತು. ಆದ್ದರಿಂದ ಈ ಎರಡು ಪ್ರಕಾರವೂ ಒಂದೇ ವಿಷಯವನ್ನು ಎರಡು ಪ್ರಕಾರದಲ್ಲಿ ತಿಳಿಸಿತು. ಪರಸ್ಪರ ವಿರೋಧವಿಲ್ಲ ಎಂಬುದು ನಮ್ಮ ಅಭಿಪ್ರಾಯವು.

ಲೋಕಪರಿಚಯವನ್ನು ಮಾಡುವ ಕಾಲದಲ್ಲಿ ಮನಸ್ಸಿನಲ್ಲಿ ಉಂಟಾಗುವ ಒಂದುವಿಧವಾದ ಅನುಕೂಲ ಪ್ರತಿಕೂಲರೂಪವಾದ ಸಂಸ್ಕಾರ ವಿಶೇಷಗಳೇ ಸುಖದುಃಖವೆನಿಸಿಕೊಳ್ಳುವುವು. ನಾನು ಸುಖಪಡುತ್ತೇನೆ; ನಾನು ದುಃಖಪಡುತ್ತೇನೆ. ಎಂದಲ್ಲವೆ ವಾಡಿಕೆಯಲ್ಲಿರುವುದು? ಕಣ್ಣು ಸುಖಪಟ್ಟಿತು; ಮೂಗು ಸುಖಪಟ್ಟಿತು; ಮೈ ದುಃಖಹೊಂದಿತು ಎಂದು ಹೇಳುವುದಿಲ್ಲ. ಇಂದ್ರಿಯ ದ್ವಾರಾ ಮನಸ್ಸಿನಲ್ಲಿ ಅನುಕೂಲ ಪ್ರತಿಕೂಲ ಸಂಸ್ಕಾರದಿಂದ ಉಂಟಾದ ಸುಖದುಃಖಜ್ಞಾನವನ್ನು ನಾವು ಅನುಭವಿಸುವೆವು. ಅಥವಾ ಮನಸ್ಸಿನಲ್ಲಿ ಸುಖದುಃಖಜ್ಞಾನವು ಉಂಟಾಗುವುದು. ಏವಂಚ ಲೋಕಪರಿಚಯವನ್ನು ಇಂದ್ರಿಯಗಳ ಸಹಾಯದಿಂದ ಮಾಡುವಕಾಲದಲ್ಲಿ ಇಂದ್ರಿಯಗಳಿಗೂ ವಸ್ತುಗಳಿಗೂ ಅನುಕೂಲ ವೃತ್ತಿಯಿಂದ ಹುಟ್ಟುವಜ್ಞಾನವೇ

ಸುಖವು; ವಿರೋಧ ವೃತ್ತಿಯಿಂದ ಹುಟ್ಟುವಜ್ಞಾನವೇ ದುಃಖವು ಎಂದು ಹೇಳಿದಂತಾಯಿತು.

ಹಿತೈಷಿಗಳು ಎಂಬುವರು ಯಾರು? ಅವರು ಏತಕ್ಕೆ ಹಿತೈಷಿಗಳೆನಿಸಿಕೊಂಡರು? ಯಾರು ಲೋಕದ ಜನರ ದುಃಖವನ್ನು ತಗ್ಗಿಸಿ ಸುಖವನ್ನು ಹೆಚ್ಚಿಸುವ ಕಾರ್ಯದಲ್ಲಿ ಪ್ರವಣರಾಗಿ ತಮ್ಮ ಜೀವಮಾನಕಾಲವನ್ನು ಕಳೆಯುವರೋ ಅವರೇ ಹಿತೈಷಿಗಳು. "ಸಂತೋಷಂ ಜನಯೇತ್ ಪ್ರಜ್ಞಃ ತದೇವೇಶ್ವರ ಪೂಜನಂ" ಎಂದಲ್ಲವೆ ಅವರ ಶಾಸನವು ಸರ್ವತ್ರ ಬೆಳಗುತ್ತಿರುವುದು? ಯಾವರೀತಿಯಲ್ಲಿ ಆ ಹಿತೈಷಿಗಳು ಲೋಕದ ಸುಖವನ್ನು ಹೆಚ್ಚಿಸಲು ಯತ್ನಿಸಿದರು? ಎಂಬುದನ್ನು ಸ್ವಲ್ಪ ಯೋಚಿಸೋಣ.

ಲೋಕಪರಿಚಯ ಜ್ಞಾನಾನುಭವದ ವೇಳೆಯಲ್ಲಿ ಉಂಟಾಗುವ ಸುಖವನ್ನೂ ಉತ್ತರಕಾಲಿಕವಾದ ಅದರ ಸ್ಮರಣವೇಳೆಯಲ್ಲಿ ಹುಟ್ಟುವ ಸುಖವನ್ನೂ ಹೋಲಿಸಿ ನೋಡೋಣ. ಪರಿಚಯಕಾಲದ ಸುಖವು ಹೆಚ್ಚೋ ಸ್ಮರಣಕಾಲದ ಸುಖವು ಹೆಚ್ಚೋ? ಸ್ಮರಣಕಾಲದ ಸುಖವೇ ಹೆಚ್ಚಾಗಿ ತೋರುವದೆಂದು ಯಾರು ತಾನೇ ಹೇಳರು? ಇದು ಅನುಭವ ಸಿದ್ಧವಾದ ವಿಷಯ.

ಊಟಮಾಡಿದ ಮೇಲೆ ಊಟಮಾಡಿದ ಮೃಷ್ಟಾನ್ನದ ರುಚಿಯು ತೋರುವದಷ್ಟೇ? ಏಕೆ? ತೋರುವ ವ್ಯಾಪಾರವು ಬುದ್ಧಿಕಾರ್ಯವಾದ್ದರಿಂದ. ಮತ್ತು ಆ ಸುಖವು ನಮ್ಮೊಡನೆ ಭೋಜನಕ್ಕೆ ಬಾರದ ಮಿತ್ರಮಂಡಳಿಯಲ್ಲಿ ವಿವರಿಸುವಾಗ ಮತ್ತಷ್ಟು ಹೆಚ್ಚಾಗಿ ಕಂಡು ಬರುವುದು. ಮಕ್ಕಳಾಟದ ಸೌಖ್ಯವನ್ನು ಕವಿಗಳ ಮಾತಿನಲ್ಲಿ ಓದಿದಾಗ ನಾವು ಹಿಂದೆ ಅನುಭವಿಸಿದ ಆ ಮಕ್ಕಳಾಟದ ಸುಖವು ಅತ್ಯತಿಶಯವಾದ ಆನಂದವನ್ನು ಕೊಡುವುದು. ಮನೆಯಲ್ಲಿ ಅಣ್ಣತಮ್ಮಂದಿರ ನಡುವೆ ಪಟ್ಟ ಸುಖವು ಪರಸ್ಥಳದಲ್ಲಿ ಒಬ್ಬೊಂಟಿಗರಾಗಿದ್ದಾಗ ಹೆಚ್ಚಾಗಿ ಕಂಡುಬರುವುದು. ಪತಿಪತ್ನಿಯರ ಪ್ರೇಮಾತಿಶಯವು ಸಂಶ್ಲೇಷ ದೆಶೆಗಿಂತ ವಿಶ್ಲೇಷದೆಶೆಯಲ್ಲಿ ಅತ್ಯಧಿಕವಾಗಿ ಕಂಡುಬರುವುದು. ಹೀಗೆ ಹೆಚ್ಚಾಗಿ ತೋರುವುದಕ್ಕೆ ಆಯಾ ಅನುಭವಗಳು ಈ ಕಾಲದಲ್ಲಿ ಎಂದರೆ ಸ್ಮರಣವೇಳೆಯಲ್ಲಿ ಬರುವುದೂ ಮನಸ್ಸಿನ ತದೈಕಾಗ್ರತೆಯನ್ನು ಚದರಿಸುವ ಕೋಟಲೆಗಳು ಯಾವುವೂ ಇಲ್ಲದೆ ಇರುವುದೂ ಕಾರಣವು. ಇದಲ್ಲದೆ ಇದಕ್ಕೆ ಮತ್ತೊಂದು ಪ್ರಬಲಕಾರಣವೂ ಉಂಟು. ಲೋಕಪರಿಚಯ

ದ್ವಾರಾ ಅನುಭವದ ವೇಳೆಯಲ್ಲಿ ಇಂದ್ರಿಯುಗಳ ವ್ಯಾಪಾರವು ವಸ್ತುವಿನ ಮೇಲೆ ಎಷ್ಟು ಕಾಲವಿರುತ್ತದೆಯೋ ಅಷ್ಟೇ ಕಾಲ ಆ ಸುಖವು ಇರುವುದು. ಉತ್ತರಕ್ಷಣದಲ್ಲಿಯೇ ಅದು ಹೋಗುವುದು. ಇಂದ್ರಿಯುಗಳು ಮೇಲೆ ಮೇಲೆ ಬರುತ್ತಿರುವ ವಿಷಯುಗಳ ಸಂಪರ್ಕದಿಂದ ಚಲಿಸುವುದರಿಂದ ಅನುಭವಗಳು ಬೇರೆ ಬೇರೆ ಆಗುತ್ತಲೆ ಹೋಗುವುವು. ಒಂದು ವಿಷಯುದ ಮೇಲಿದ್ದ ಸ್ಥಿತಿಯುಃ ಮಾರಿ ಹೋಗುವುದು. ಉದಾಹರಣೆಗಾಗಿ ಒಂದು ನದಿಯ ಪ್ರವಾಹವನ್ನು ನೋಡುತ್ತಿರುತ್ತೇವೆಂದು ಇಟ್ಟುಕೊಳ್ಳೋಣ. ಅಗ ಪಕ್ಕದ ಮರದ ಮೇಲೆ ಕೂಗಿದ ಕಾಗೆಯ ಕೂಗು ಕಿವಿಗೆ ಬಿದ್ದರೆ ಒಡನೆಯೆ ಮನಸ್ಸು ನದಿಯ ಕಡೆಯನ್ನು ಬಿಟ್ಟು ಆ ಕೂಗಿನ ಕಡೆ ಹೋಗುವುದು. ಕೂಡಲೆ ಎದುರಿಗೆ ಒಂದು ನಾಯಿಯು ಪ್ರವಾಹಕ್ಕೆ ನುಗ್ಗಿದರೆ ಹಿಂದಣ ಗಮನವು ಮಾರಿ ಹೋಗಿ ಬೇರೆ ತರದ ಪರಿಚಯಾನುಭವವು ಬರುವದು. ಹೀಗಿರುವುದರಿಂದ ಇಂದ್ರಿಯುಗಳ ಸಹಾಯುದಿಂದ ಹೊಂದುವ ಅನುಭವವು ಆ ಅನುಭವಕಾಲದವರೆಗೆ ಹೊರತು ಮಿಕ್ಕ ವೇಳೆಯಲ್ಲಿ ನಿಲ್ಲದು. ಇಲ್ಲಿ ಒಂದು ಆಕ್ಷೇಪಣೆ ಹುಟ್ಟುವುದು. ಹಾಗೆ ಆ ಅನುಭವವು ಉತ್ತರಕ್ಷಣದಲ್ಲಿಯೇ ಮಾಯುವಾಗುವುದು ಎಂದರೆ ಅದು ನಾಶವಾಗಿ ಹೋಗುವುದೋ? ಪುನಃ ಉದ್ಭವಿಸುವುದೋ? ಉದ್ಭವಿಸುವದು. ನಾಶವಾಗುವುದಿಲ್ಲ. ಉದ್ಭವಿಸುವದು ಹೇಗೆಂದರೆ—ಅನುಭವಕಾಲದಲ್ಲಿ ಉಂಟಾದ ಸಂಸ್ಕಾರಗಳು ಮನಸ್ಸಿನಲ್ಲಿ ಅವ್ಯಕ್ತವಾಗಿ ಅಡಗಿರುವುವು. ಇತರ ವೇಳೆಯಲ್ಲಿ ಹಿಂದೆ ಅನುಭವಿಸಿದ ಪರಿಚಯಾನುಭವಗಳು ಇಲ್ಲವೇ ಇಲ್ಲವೆಂಬದಾಗಿ ತೋರುತ್ತಿದ್ದರೂ ಉತ್ತೇಜನಸಾಮಗ್ರಿಯುಂಟಾದಾಗ ಆ ಸಂಸ್ಕಾರಗಳ ಪ್ರತಿಭಾನಗಳು ಉಂಟಾದಾಗ ನಾವು ಅನುಭವ ವೇಳೆಯಲ್ಲಿ ಅನುಭವಿಸಿದ ಅನುಭವಗಳು ತಾವಾಗಿಯೇ ಬರುವುವು. ಈ ಕಾಲದಲ್ಲಿ ಇಂದ್ರಿಯುದ ಏಕಾಗ್ರತೆಯನ್ನು ಹೋಗಲಾಡಿಸುವ ವಿರೋಧಸಾಮಗ್ರಿಗಳು ಯಾವುವೂ ಇರುವುದಿಲ್ಲ. ಆದ್ದರಿಂದ ಮನಸ್ಸು ಅನುಭವ ವೇಳೆಗಿಂತ ಏಕಾಗ್ರತೆಯನ್ನು ಹೊಂದಿ ಇತರ ಅನುಭವಗಳ ಕಡೆ ಹೋಗದೆ ಆ ಒಂದು ಅನುಭವದಲ್ಲಿಯೇ ನಿಲ್ಲುವುದರಿಂದ ಸುಖವು ಹೆಚ್ಚಾಗಿ ತೋರಬೇಕು ಆದ್ದರಿಂವ ಅದು ಹಾಗೆ ಹೆಚ್ಚಾಗಿ ತೋರುವದು. ಇದೂ ಅಲ್ಲದೆ ಹೀಗೆ ಆಗುವದಕ್ಕೆ ಮತ್ತೊಂದು ಕಾರಣವನ್ನು ಯೋಚಿಸಿರಿ. ಕಷ್ಟಪಡದೆ ಸುಖವಿಲ್ಲ. ಹೀಗಿದ್ದರೂ ಎಲ್ಲರೂ ಸುಖಪಡುವದಕ್ಕೆ ಮಾಡಬೇಕಾದ ಶ್ರಮವನ್ನು ಅಪೇಕ್ಷಿಸದೆ ಸುಖವನ್ನು ಮಾತ್ರ ಅಪೇಕ್ಷಿಸುವರು. "ಧರ್ಮಸ್ಯ ಫಲ-

ಮಿಚ್ಛಂತಿ, ಧರ್ಮಂ ನೇಚ್ಛಂತಿ ಮಾನವಾ: ” ಅಧಿಕಾರಿಯಾಗಿ ಸಾರೋಟಿನಲ್ಲಿ ಗುವುದಕ್ಕೆ ಎಲ್ಲರೂ ಆಶೆಪಡುತ್ತಾರೆ. ಹಾಗೆ ಅಧಿಕಾರವನ್ನು ಹೊಂದುವುದಕ್ಕೆ ಅವನು ಪಟ್ಟ ಕಷ್ಟವನ್ನು ಒಬ್ಬರೂ ಅಪೇಕ್ಷಿಸರು. ಹೀಗಿರಲು ಒಂದೊಂದು ಲೋಕಪರಿಚಯವನ್ನು ತದ್ವಾರಾ ಲಭಿಸುವ ಸುಖವನ್ನು ತಾವು ಸ್ವಲ್ಪವೂ ಶ್ರಮ ತೆಗೆದುಕೊಳ್ಳದೆ ಅನುಭವಿಸಬೇಕೆಂಬ ಅಪೇಕ್ಷೆಯು ಸರ್ವತ್ರ ಇರುವುದು. ಉತ್ತೇಜಕದಿಂದ ಸ್ಮರಣರೂಪವಾಗಿ ಹುಟ್ಟುವ ಸುಖವು ಶ್ರಮರೂಪವಾದ ದು:ಖದಿಂದ ವಿರಹಿತವಾಗಿದೆ. ಆದ್ದರಿಂದ ಸ್ಮರಣವೇಳೆಯಲ್ಲಿ ಅನುಭವಿಸಿದ ಅನುಭವವು ನಮಗೆ ಹೆಚ್ಚಿದಂತೆ ಕಾಣುವದು. ಇತ್ಥಂಚ, ಸ್ಮರಣವೇಳೆಯಲ್ಲಿ ಜನಿಸುವ ಸುಖವು ಇಂದ್ರಿಯಗಳಿಗೆ ಪಾರಿಪ್ಲವವಿಲ್ಲದೆ ತತ್ಪ್ರೇರಕವಾದ ಮನಸ್ಸಿಗೆ ಅನ್ಯತ್ರಚಲನಾವಕಾಶವಿಲ್ಲದೆ ಆ ವಸ್ತುವಿನ ಮೇಲೆಯೇ ಚಿರಕಾಲ ನಿಲ್ಲಬಹುದಾಗಿರುವುದರಿಂದಲೂ, ಪರಿಚಯಕಾಲದಲ್ಲಿ ಉಂಟಾಗುವ ಶ್ರಮಗಳು ಇಲ್ಲದೆ ಇರುವುದರಿಂದಲೂ, ಪರಿಚಯವೇಳೆಗಿಂತ ಅತಿಶಯವಾಗಿಯೂ, ಹಿತವಾಗಿಯೂ ಇರುತ್ತದೆ. ಇದು ಅನುಭವಸಿದ್ಧವಾಗಿಯೂ ಇದೆ.

ಹೀಗಿರಲು ಲೋಕಪರಿಚಯ ಕಾಲದಲ್ಲಿ ಹುಟ್ಟುವ ಸುಖಾನುಭವವನ್ನು ಅಭಿವೃದ್ಧಿಪಡಿಸಲು ಯತ್ನಿಸಿದ ಹಿತೈಷಿಗಳಿಗಿಂತ ಸ್ಮರಣವೇಳೆಯಲ್ಲಿ ಆಯಾ ಸುಖಾನುಭವಗಳನ್ನು ಹೆಚ್ಚಿಸಿಕೊಡಲು ಪ್ರವರ್ತಿಸಿದ ಹಿತೈಷಿಗಳು ನಮ್ಮ ಹೆಚ್ಚಾದ ಗೌರವಕ್ಕೆ ಪಾತ್ರರಾಗಬೇಕು.

ಮನುಷ್ಯನು ಅನುಭವಿಸುವ ಸುಖಗಳಲ್ಲಿ ಕೆಲವು ಶರೀರಕ್ಕೆ ಮಾತ್ರ ಸಂಬಂಧಪಟ್ಟವು. ಕೆಲವು ಮನಸ್ಸಿಗೆ ಮಾತ್ರ ಸಂಬಂಧಪಟ್ಟವು. ಇವುಗಳಲ್ಲಿ ಶರೀರಕ್ಕೆ ಸಂಬಂಧಪಟ್ಟವು ಮನಸ್ಸಿಗೆ ಸಂಬಂಧಪಟ್ಟವಕ್ಕಿಂತ ಅತಿಶಯಿತವೂ ಅಲ್ಲ; ಸೂಕ್ಷ್ಮವೂ ಅಲ್ಲ;

ಲೋಕಹಿತೈಷಿಗಳಲ್ಲಿ ಕರ್ಮೇಂದ್ರಿಯದ್ವಾರಾ ತಾತ್ಕಾಲಿಕ ಸುಖವನ್ನು ಹೆಚ್ಚಿಸಲು ಹೊರಟವರು ಹಲವರು. ಜ್ಞಾನೇಂದ್ರಿಯದ್ವಾರಾ ತಾತ್ಕಾಲಿಕ ಸುಖವನ್ನು ಹೆಚ್ಚಿಸಲು ಹೊರಟವರು ಕೆಲವರು. ಉಭಯೇಂದ್ರಿಯದ್ವಾರಾ ತತ್ಕಾಲಿಕ ಸುಖವನ್ನು ಹೆಚ್ಚಿಸಲೂ ಹೊರಟವರು ಹಲವರು. ಬಹಿರಿಂದ್ರಿಯಗಳ ಸಂಪರ್ಕವಿಲ್ಲದೆ ಮಾನಸೇಂದ್ರಿಯವನ್ನು ಮಾತ್ರವೇ ಅವಲಂಬಿಸಿ ತದ್ವಾರಾ ಲೋಕಸುಖವನ್ನು ಹೆಚ್ಚಿ

ಸಲು ಹೊರಟವರು ಕೆಲವರು. ಇವರು ಯಾವತ್ತು ಹಿತೈಷಿಗಳು ಯಾವ ಯಾವ ಇಂದ್ರಿಯವನ್ನು ಅವಲಂಬಿಸಿ ಹೊರಟಿದ್ದರೂ ಮುಖ್ಯವಾಗಿ ಮಾನಸೇಂದ್ರಿಯದ ಸಹಾಯವನ್ನೇ ಇಟ್ಟುಕೊಳ್ಳಬೇಕು. ಸುಖಜ್ಞಾನವು ಮಾನಸೇಂದ್ರಿಯ ವ್ಯಾಪಾರ ವಾಗಿರಲಾಗಿ ಇವರೆಲ್ಲರೂ ಮಾನಸೇಂದ್ರಿಯದಲ್ಲಿ ತಾತ್ಕಾಲಿಕ ಮಾತ್ರದಲ್ಲಿ ಅನುಭ ವಿಸಲ್ಪಡುವ ಸುಖವನ್ನು ಹೆಚ್ಚಿಸುವದರಲ್ಲಿ ನಿರತರಾದರು. ಸ್ಮರಣವೇಳೆಯಲ್ಲಿ ಸುಖ ವನ್ನು ಹುಟ್ಟಿಸುವ ಶಕ್ತಿಯು ಇವರಿಗೆ ಮೀರಿದ ಶಕ್ತಿಯು. ಮತ್ತು ಸದ್ವಾರಕವಾಗಿ ಮಾನಸೇಂದ್ರಿಯದಲ್ಲಿ ಹುಟ್ಟುವ ಸುಖಕ್ಕಿಂತ ಅದ್ವಾರವಾಗಿ ಮಾನಸೇಂದ್ರಿಯದಲ್ಲಿ ಹುಟ್ಟುವ ಸುಖವು ಘನವಾದದ್ದು. ಸದ್ವಾರಕವಾಗಿ ಹುಟ್ಟುವದು ತಾತ್ಕಾಲಿಕವಾ ದದ್ದು. ಅದ್ವಾರಕವಾಗಿ ಹುಟ್ಟುವದು ಸ್ಮರಣವೇಳೆಯದು. ಇಂದ್ರಿಯದ್ವಾರಾ ಹುಟ್ಟುವ ಸುಖಗಳಲ್ಲಿ ತಾರತಮ್ಯವಿರುವ ಕಾರಣ ಆಯಾ ಇಂದ್ರಿಯಗಳ ಬಲದಿಂದ ಲೋಕಹಿತವನ್ನು ಹುಟ್ಟಿಸಿ ಹೆಚ್ಚಿಸುವದರಲ್ಲಿ ಯತ್ನಿಸಿದ ಹಿತೈಷಿಗಳಲ್ಲಿ ತಾರತಮ್ಯ ಗಳನ್ನು ಒಪ್ಪಿಕೊಳ್ಳಬೇಕು.

ಹೀಗಿರಲಾಗಿ ಸುಖವನ್ನು ಹೆಚ್ಚಿಸಿ ಲೋಕೋಪಕಾರ ಮಾಡುವ ವಿಷಯದಲ್ಲಿ ನಿರತರಾದ ಹಿತೈಷಿಗಳಲ್ಲಿ:—

ಮನೆ, ಮಠ, ಅರಮನೆ, ಆರಾಮಗಳನ್ನು ನಿರ್ಮಿಸಿದ ಕಲಾಜ್ಞರ ಉಪಕಾರವು ಹೆಚ್ಚೋ, ಬಂಡಿ, ಬೈಸಿಕಲ್, ರೈಲ್‌ಗಳನ್ನು ನಿರ್ಮಿಸಿ ಉಪಕಾರ ಮಾಡಿದ ಕಲಾವಿದರ ಉಪಕಾರವು ಹೆಚ್ಚೋ, ವೀಣೆ, ಸಾರಂಗಿ, ಹಾರ್‌ಮೋನಿಯಮ್ ಮೊದಲಾದ ಸಂಗೀತ ವಾದ್ಯಗಳನ್ನು ಮಾಡಿದ ಉಪಕಾರಿಗಳ ಉಪಕಾರವು ಹೆಚ್ಚೋ, ಚಿತ್ರಪಟಗಳನ್ನು ನಿರ್ಮಿಸಿದ ಕಲಾಕುಶಲರ ಉಪಕಾರವು ಹೆಚ್ಚೋ ಕಾವ್ಯಗಳನ್ನು ನಿರ್ಮಿಸಿ ಅದ್ವಾರ ಕವಾದ ಮಾನಸಿಕ ಸುಖವನ್ನು ಹುಟ್ಟಿಸಿ ಆ ಸುಖವನ್ನು ಸ್ಮರಣವೇಳೆಯಲ್ಲಿ ಅತ್ಯತಿಶ ಯವಾಗಿ ಅನುಭವಿಸುವಂತೆ ಮಾಡಿದ ಪರಮೋಪಕಾರಿಗಳಾದ ಕವಿಗಳ ಉಪಕಾ ರವು ಮೇಲೊ? ಯೋಚಿಸಿರಿ. ಇವರ ಸಮುದಾಯದಲ್ಲಿ ಯಾರು ಅಗ್ರಾಸನವನ್ನು ವಹಿಸುವದಕ್ಕೆ ಅರ್ಹರೋ ನೀವೇ ಹೇಳಿ. ಕವಿಗಳೇ ಕಲಾವಿದರಾದ ಹಿತೈಷಿಗಳಲ್ಲಿ ನಿಪುಣರೆಂದು ಎಲ್ಲರೂ ಒಪ್ಪಿಕೊಳ್ಳಬೇಕು. ಕವಿಗಳೇ ಜೈಸಲಿ! ಅವರ ಕಾರ್ಯವೇ ಸರ್ವತ್ರ ವ್ಯಾಪಿಸಲಿ! ಅವರ ಪ್ರಭಾವವೇ ಎಲ್ಲಾ ಕಡೆಯಲ್ಲಿಯೂ ಹರಡಲಿ!

ಈ ವಿಷಯವನ್ನೇ ಬೇರೆ ರೀತಿಯಲ್ಲಿ ಮುಂದೆ ವಿವರಿಸುವೆವು.

ಲೋಕದಲ್ಲಿ ಎಲ್ಲಾ ಸೀಮೆಗಳಲ್ಲಿಯೂ, ಎಲ್ಲಾ ತರದ ಜನಗಳು ಪರಿಚಯ ಮಾಡಿ ಅನುಭವಿಸಿದ ಅನುಭವಗಳನ್ನು ಅನುಭವಮಾಡಲು ನಮಗೆ ಸಾಧ್ಯವೇ? ಇಲ್ಲ; ನಾವು ನಮ್ಮ ಸುತ್ತಮುತ್ತಲಿರುವ ಪದಾರ್ಥಗಳ ಅನುಭವಗಳನ್ನು ಹೊಂದ ಬಹುದು. ಹಿಮಾಚಲದ ತಪ್ಪಲಿಂದ ರಾಮಸೇತುವರೆಗೂ, ವಾಸಮಾಡುವ ಜನ ಗಳ ಅನುಭವವನ್ನು ಒಂದುವೇಳೆ ಹೊಂದಬಹುದಾದರೂ, ಇತರ ದೇಶಗಳಲ್ಲಿ ಅದೇ ಕಾಲಕ್ಕೆ ಉಂಟಾಗುವ ಇತರರ ಅನುಭವಗಳನ್ನು ಹೊಂದಲಾರೆವು. ಆಲ್ಪ್ಸ್ ಬೆಟ್ಟಗಳಲ್ಲಿ ಹಿಮಝರಿಗಳ ವೇಗವನ್ನೂ, ಅವುಗಳಲ್ಲಿ ಆಗಾಗ್ಗೆ ಉಂಟಾಗುವ ಚಿತ್ರವಿಚಿತ್ರವಾದ ಆಕೃತಿಗಳನ್ನೂ, ಉತ್ತರಸಾಗರದ ತೀರದಲ್ಲಿ ಹಿಮಂತಋತು ವಿನಲ್ಲಿ ಪ್ರಕಾಶಿಸುವ "ಅರೋರ್" ಎಂಬ ತೇಜೋರಾಶಿಯ ಮಹಿಮೆಯನ್ನೂ, ಸಹಾರಾಮರಳುಗಾಡಿನ ಮಧ್ಯದಲ್ಲಿ ಬೀಸುವ ಸೈಮೂಮ್‘ ಬಿರುಗಾಳಿಯ ಹಾವ ಳಿಯನ್ನೂ, ಸಮುದ್ರದ ಅಲೆಗಳ ರಭಸಕ್ಕೆ ಸಿಕ್ಕಿ, ಮುಳುಗಿ ಹೋಗುವ ಹಡಗಿನ ರೀತಿಯನ್ನೂ ಮತ್ತು ಅದರೊಳಗೆ ಪ್ರಯಾಣಮಾಡುತ್ತಿರುವ ನಾವಿಕರು ಪ್ರಾಣ ಗಳನ್ನು ಉಳಿಸಿಕೊಳ್ಳಲು ಮಾಡುವ ವ್ಯಾಪಾರಗಳನ್ನೂ, ರೋದನಗಳನ್ನೂ ಸಮು ದ್ರದ ಅಡಿಯಲ್ಲಿರುವ ಜಲಚರಗಳ ವಿಸ್ಮಯವಾದ ಆಕೃತಿ ಮತ್ತು ವ್ಯಾಪಾರಗ ಳನ್ನೂ, ವಿಮಾನದಲ್ಲಿ ಕುಳಿತು ಅಂತರಿಕ್ಷದಲ್ಲಿ ಸಂಚಾರಹೊರಟಾಗ ಭೂಮಿಯ ಮೇಲೆ ಕಂಡು ಬರುವ ವಿಚಿತ್ರ ದರ್ಶನಗಳನ್ನೂ, ನಯಾಗರಾ ನದಿಯ ಜಲಪಾತದ ಅದ್ಭುತ ದರ್ಶನವನ್ನೂ, ಪ್ರೈಯರಿಗಳೆಂದು ಕರೆಯಲ್ಪಡುವ ಅಮೇರಿಕಾಖಂಡದ ಹುಲ್ಲುಗಾಡು ಹತ್ತಿಕೊಂಡಾಗ ಆ ಕಾಡಿನೊಳಗಿರುವ ಕಾಡುಮೃಗಗಳ ಸಂಕಟ, ಗಾಬರಿ, ನಿರಾಶೆ ಮೊದಲಾದುವುಗಳನ್ನೂ, ಅಫ್ರಿಕಾಖಂಡದ ಬೆಟ್ಟಗಳ ಕಣಿವೆಯಲ್ಲಿ ಹೆಬ್ಬಾವುಗಳ ತೆಕ್ಕೆಯಲ್ಲಿ ಸಿಕ್ಕಿ, ನೆರಳಿ ಊಳುತ್ತಿರುವ ಸಿಂಹಶಾರ್ದೂಲಗಳನ್ನೂ ಇವೇ ಮೊದಲಾದ ಈಶ್ವರಸೃಷ್ಟಿಯಲ್ಲಿ ನಾವು ನೋಡಬಹುದಾದ ದೇಶ, ಮೃಗ, ಪಕ್ಷಿ, ಪ್ರಾಣಿಗಳಲ್ಲಿ ಸಂಭವಿಸುವ ಚಮತ್ಕಾರಗಳನ್ನು ಸಾಕ್ಷಾತ್ತಾಗಿ ನೋಡಿ, ಇಷ್ಟನ್ನೂ ಅನುಭವಿಸಲು ಒಬ್ಬನಿಗೆ ಒಂದು ಜೀವಮಾನಕಾಲವು ಸಾಕಾದೀತೆ? ಇದೊಂದು ವಿಷಯವನ್ನು ಮನಸ್ಸಿಗೆ ತೆಗೆದುಕೊಳ್ಳಿರಿ. ಒಬ್ಬೊಬ್ಬರೆ ಒಂದೊಂದು ವಿಧವಾದ ಅನುಭವವನ್ನು ಹೊಂದಿದರೇ ಹೊರತು, ಎಲ್ಲಾ ತೆರದ ಅನುಭವಗಳನ್ನೂ, ಎಲ್ಲರೂ ಒಟ್ಟಿಗೆ, ಸಂಪೂರ್ಣವಾಗಿ ಅನುಭವಿಸಲಿಲ್ಲ. ನಮಗೇನೇ ಅವರ ಅಷ್ಟು ಅನುಭವ

ಗಳನ್ನೂ ಒಟ್ಟಿಗೆ ಅನುಭವಿಸಲು ಆಶೆ ಇದೆ. ಎಲ್ಲರೂ ಅನುಭವಿಸಿ ಪಟ್ಟ ಸುಖಾನು ಭವಗಳನ್ನು ನಾವೆಲ್ಲರೂ ಸಂಪೂರ್ಣವಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಅನುಭವಿ ಸುವುದಾದರೆ, ನಮ್ಮ ಸುಖವು ಎಷ್ಟುಮಟ್ಟಿಗೆ ಹೆಚ್ಚುವುದು, ಯೋಚಿಸಿರಿ. ಆದ್ದ ರಿಂದ ಎಲ್ಲರ ಅನುಭವವನ್ನು ಈ ಜೀವಮಾನದಲ್ಲಿಯೇ ಅನುಭವಿಸಬೇಕೆಂಬ ಆಶೆಯು ಯಾರಿಗೆ ತಾನೇ ಹುಟ್ಟದು? ಆದರೂ ಆ ಅನುಭವಗಳಿಗಾಗಿ, ಅವರವರು ಪಟ್ಟ ಕಷ್ಟಗಳನ್ನು ಯೋಚಿಸಿದರಂತೂ ಅವರವರ ಆಯಾ ಕಷ್ಟಗಳೂ ಬೇಡ. ಅವ ರವರ ಆಯಾ ಸುಖಾನುಭವಗಳೂ ಬೇಡ ಎಂದು ತೋರುತ್ತದೆ. ಹೀಗಿರಲು ಅವರು ಪಟ್ಟ ಕಷ್ಟಗಳಲ್ಲಿ ತಿಲದಷ್ಟು ಕಷ್ಟಕ್ಕೆ ಒಳಗಾಗದೆ, ಅವರ ಅನುಭವಗಳು ಯಾವ ತ್ತನ್ನೂ, ಹೊಂದಬಹುದಾದ ಒಂದು ಸಂಭವವಿದ್ದರೆ, ಯಾರು ತಾನೆ ಅವುಗಳನ್ನು ಬೇಡವೆಂದು ಆ ಅವಕಾಶವನ್ನು ತಳ್ಳಿಬಿಡುವರು? ಆ ಸುಖಾನುಭವವನ್ನು ಅನುಭವಿ ಸಲು ಯಾರು ತಾನೇ ಮುಂದುವರಿಯರು? ತುಸವೂ ತ್ರಾಸವಿಲ್ಲದೆ, ಎಷ್ಟೋ ತನು ಮನ, ಶ್ರಮಗಳೂ, ಧನನಷ್ಟವೂ, ಕಾಲ, ಸಾಹಸಗಳೂ, ಅಪಾಯಗಳೂ, ಬೇಕಾ ಗಿರುವ ಲೋಕದ ಚಿತ್ರಸೃಷ್ಟಿಸ್ಥಿತಿಗಳ ಪರಿಚಯದಮೂಲಕ ಲಭಿಸುವ ಸುಖಾನು ಭವಗಳನ್ನು, "ಶ್ರಮಲೇಶವನ್ನೂ ಪಡಬೇಡಿರಿ; ನಾವು ಅಂತಹ ಸುಖಾನುಭವ ಗಳನ್ನು ದಾನಕೊಡುವೆವು. ಕೈನೀಡಿ ತೆಗೆದುಕೊಂಡು ಅನುಭವಿಸಿ, ನಿಮಗೆ ಸೇರಿದ ಜನರಿಗೂ ಕೊಡಿರಿ. ಅವರೊಡನೆ ಕಲೆತು, ಆ ಸುಖವನ್ನು ಅಭಿವೃದ್ಧಿಪಡಿಸಿಕೊಂಡು ಆನಂದಪಾರವಶ್ಯವನ್ನು ಹೊಂದಿರಿ." ಎಂದು ಹೇಳುತ್ತಾ ನಿಮ್ಮ ಅವಕಾಶವನ್ನು ನಿರೀಕ್ಷಿಸಿ, ಆ ಅನುಭವಗಳನ್ನು ಕೊಡಲು ಕೃಪೆಮಾಡಿ, ನಿಮ್ಮ ಹತ್ತರಕ್ಕೆ ಯಾರಾ ದರೂ ಅಂಥ ಮಹಾತ್ಮರು ಬಂದರೆ, ಅವರನ್ನು ತಿರಸ್ಕರಿಸುವಿರಾ? ಅವರ ಪರಾ ರ್ಥೈಕಪ್ರಯೋಜನವಾದ ದಾತೃತ್ವವನ್ನು ಎಷ್ಟು ಕೊಂಡಾಡುವಿರಿ? ಅವರಲ್ಲಿ ಎಷ್ಟು ಕೃತಜ್ಞತೆಯನ್ನು ತೋರಿಸುವಿರಿ?

ಹಾಗೆ ನಮಗೆ ಹಿತಮಾಡಬೇಕೆಂಬ ಇಚ್ಛೆಯಿಂದ ನಮ್ಮ ಹತ್ತರಕ್ಕೆ ಬರುವ ಹಿತೈಷಿಗಳು ಯಾರಿರುವರು? ಅವರು ಯಾವ ರೀತಿಯಲ್ಲಿ ಆ ಅನುಭವಾನಂದವನ್ನು ಕೊಡುತ್ತಿರುವರು? ಆ ಮಹಾತ್ಮರು ಎಲ್ಲಿರುವರು? ಅವರನ್ನು ನಾವೇ ಹುಡುಕಿ ಕೊಂಡು ಹೋಗಿ, ಆಶ್ರಯಿಸೋಣವೆಂದು ಯತ್ನಿಸಲೊಲ್ಲವೇ? ಆ ಮಹಾತ್ಮರು ನಮ್ಮ ಅನುಗ್ರಹವನ್ನು ನಿರೀಕ್ಷಿಸುತ್ತಾ ಸರ್ವತ್ರ ನಮ್ಮ ಹತ್ತರವೇ ಕಾದಿದ್ದರೂ ನಾವು ಅವರ ಕಡೆ ಲಕ್ಷ್ಯಕೊಡುವದಿಲ್ಲ. ನಾವು ಅಂಥ ಗರ್ವಾಂಧರು!

ಆ ಮಹಾತ್ಮರಲ್ಲಿ ಚಿತ್ರಕರ್ಮನಿಪುಣರು ಒಬ್ಬರಾಗಿರುವರು. ಅವರು ತಾವು ನೋಡಿದ ಮನೋಹರವಾದ ನೋಟಗಳಲ್ಲಿ ತಾವು ಪಟ್ಟ ಅನುಭವಗಳನ್ನು ಇತರರೂ ಹೊಂದಿ ಆನಂದಪಡಲಿ, ಎಂದು ಚಿತ್ರಫಲಕದಮೇಲೆ ಆ ನೋಟಗಳನ್ನು ಲೇಖನಿಗಳಿಂದ ಚಿತ್ರಿಸಿ, ನಮಗೆ ತೋರಿಸುತ್ತಿರುವರಲ್ಲವೇ? ಅವರು ಬರೆದಿಟ್ಟು ಹೋದ ಚಿತ್ರಪಠಗಳನ್ನು ನೋಡಿ, ಆ ನೋಟಗಳ ಸುಖವನ್ನು ಎಲ್ಲೆಲ್ಲಿಯೂ ನಾವು ನೋಡಿ ನೋಡಿ ಆನಂದಪಡುತ್ತಿರುವುದಿಲ್ಲವೇ ? ಅವರ ಉಪಕಾರಕ್ಕೆ ನಮ್ಮಲ್ಲಿ ಎಷ್ಟೋ ಜನರು ಕೃತಜ್ಞತೆಯನ್ನು ತೋರಿಸುತ್ತಿಲ್ಲವೇ? ಈಗಲೂ ಯೂರೋಪಖಂಡದಲ್ಲಿ ಹುಟ್ಟಿ ಪ್ರಸಿದ್ಧಿಯನ್ನು ಪಡೆದ ರಫೇಲ್‌ಮೈಕೇಲ್ ಆಂಗಿಲೋ ಮೊದಲಾದ ಚಿತ್ರಿಕ ಶ್ರೇಷ್ಠರ ಚಿತ್ರಪಠಗಳು ಸರ್ವೋತ್ಕೃಷ್ಟಗಳೆಂದು ಹೊಗಳಿಸಿಕೊಂಡು ಎಷ್ಟು ಜನಗಳ ಮನಸ್ಸನ್ನು ಅಪಹರಿಸುತ್ತಾ ಇಲ್ಲ? ನಮ್ಮ ದೇಶದಲ್ಲಿ ಈಚೆಗೆ ಬಹಳ ಪ್ರಸಿದ್ಧನಾದ ರವಿವರ್ಮನೆಂಬ ಚಿತ್ರಿಕ ಮಹಾಶಯನ ಚಿತ್ರಪಠಗಳು ಪೂರ್ವಕಾಲದ ಮಹಾತ್ಮರ ಚರಿತ್ರೆಗಳನ್ನು ನಮ್ಮ ಕಣ್ಣೆದುರಿಗೆ ತೋರಿಸಿ, ಆನಂದ ಹುಟ್ಟಿಸುತ್ತಿವೆಯಲ್ಲವೇ? ಆ ಚಿತ್ರಪಠಗಳು ಎಷ್ಟು ಆನಂದವನ್ನು ಉಂಟುಮಾಡಿದುವು? ಈಗ ಮಾಡುತ್ತಿರುವುವು? ಮುಂದೆ ಮಾಡುವವು? ಎಂಬುದಕ್ಕೆ ಅವರ ಚಿತ್ರಪಠಗಳ ಪ್ರತಿಕೃತಿಗಳು ಅನೇಕರ ಮನೆಯಲ್ಲಿ ಒಳ್ಳೆಯ ಸ್ಥಾನಗಳನ್ನು ಅಲಂಕರಿಸುತ್ತಾ ಇರುವುದೇ ದೃಷ್ಟಾಂತವಾಗಿದೆ. ಇವರು ನೇತ್ರೇಂದ್ರಿಯದಿಂದ ತಾವು ಪಟ್ಟ ಸುಖವನ್ನು ಈ ರೀತಿಯಲ್ಲಿ ಜನರಿಗೆ ದಾನಮಾಡುತ್ತಿರುವರು.

ಇವರು ಮಾಡಿದ ಉಪಕಾರದಲ್ಲಿ ಒಂದು ನ್ಯೂನತೆಯನ್ನು ಕಂಡ ಶಿಲ್ಪಿಕರೆಂಬ ಮಹಾತ್ಮರು ಅದನ್ನು ನಿವಾರಿಸಿ ಉಪಕಾರಮಾಡಲು ಮುಂದುವರಿದರು. ಚಿತ್ರಿಕರು ಎಷ್ಟೇ ರಮಣೀಯವಾಗಿ ಸರಿಯಾಗಿ ಪ್ರಪಂಚದ ಪ್ರಕೃತಿಯ ಸಾಮ್ಯವನ್ನು ಚಿತ್ರಫಲಕದಲ್ಲಿ ಎತ್ತಿ ದರ್ಶನಮಾಡಿಸಿದರೂ ಪ್ರಕೃತಿಯಲ್ಲಿರುವ ಘನಭಾಗವೂ, ವರ್ತುಲತ್ವವೂ, ಮಾಂಸಲತ್ವವೂ, ಚಲನದಿಂದುಂಟಾಗುವ ಶರೀರಗತವಾದ ಅವಯವ ಸ್ಥಿತಿಭೇದಗಳೂ, ಗೋಚರಿಸವು. ಇದಲ್ಲದೆ ಘನತೆಯು ವಸ್ತುಗಳಲ್ಲಿ ಸಹಜವಾಗಿರುವ ಧರ್ಮವು. ಘನತೆ ಇಲ್ಲದ ಪದಾರ್ಥವು ಕಣ್ಣಿಗೆ ಗೋಚರಿಸದು. ಇದನ್ನು ಚಿತ್ರಿಕರು ತಿಳಿಯದೆ ಇರಲಿಲ್ಲ. ತಮ್ಮ ಚಿತ್ರದಲ್ಲಿ ಆ ಕೊರತೆಯನ್ನು ಹೋಗಲಾಡಿಸಲು, ಅಪೂರ್ವ ವರ್ಣಮಿಶ್ರ ಮೊದಲಾದುವುಗಳಿಂದ ಬಹು ಕಷ್ಟಪಟ್ಟು ತೋರಿಸಿದರು. ಎಷ್ಟು ಕಷ್ಟಪಟ್ಟರೂ ಸಂಪೂರ್ಣವಾಗಿ ಮೇಲೆ ಹೇಳಿದ ಘನತೆಯ ದರ್ಶನವು ಅವ

ರಿಂದ ತೋರಿಸಲು ಆಗಲಿಲ್ಲ. ಅಂಗಾಂಗಗಳ ಪರಿಣಾಮವೂ, ಸ್ಥಿತಿಭೇದಗಳೂ, ಚಿತ್ರಪಠದಲ್ಲಿ ಅಷ್ಟು ಚೆನ್ನಾಗಿ ಕಂಡುಬರಲಿಲ್ಲ. ಈ ವಿಧವಾದ ನ್ಯೂನತೆಗಳನ್ನು ನಿವಾರಣಮಾಡುವುದೇ ಶಿಲ್ಪಿಕರ ಮುಖ್ಯವಾದ ಉದ್ದೇಶವು—ಅವರು ಶಿಲೆ, ಲೋಹ, ಮಣ್ಣು, ಮರ ಮೊದಲಾದ ದ್ರವ್ಯಗಳಿಂದ ತಾವು ನೋಡಿ ಅನುಭವಿಸಿದ ನೋಟಗಳ ಬಿಂಬಗಳನ್ನು ಮಾಡಿ, ಆ ಚಿತ್ರಿಕರ ಕಾರ್ಯದಲ್ಲಿ ಸಹಜವಾದ ಕೊರತೆಗಳನ್ನು ದೂರೀಕರಿಸಿ, ಪ್ರಕೃತಿಯ ಸಾಕ್ಷಾದ್ದರ್ಶನದಿಂದ ಉಂಟಾಗುವ ಆನಂದವನ್ನು ಲೋಕಕ್ಕೆ ದಾನಮಾಡಿದರು. ಇವರ ಉಪಕಾರವು ಚಿತ್ರಿಕರ ಉಪಕಾರಕ್ಕಿಂತ ಮೇಲಾದ್ದು. ಈ ಶಿಲ್ಪಿಕಮಹಾಶಯರಲ್ಲಿ ಪ್ರಗಲ್ಭರಾದವರು ಪರ್ಯಾಲೋಚಿಸಿ ಪ್ರಕೃತಿಪ್ರತಿಕೃತಿಗಳನ್ನು ತೋರಿಸುವ ವಿಗ್ರಹಗಳ ಮೇಲೆ ನೇತ್ರೇಂದ್ರಿಯಕ್ಕೆ ವಿಷಯವಾದ ಬಣ್ಣಗಳನ್ನೂ ಸಹ ಸೇರಿಸಿ, ಚಿತ್ರಿಕರ ಕಲೆಯಿಂದ ಉಂಟಾದ ಆನಂದವನ್ನು ಜತೆಗೊಳಿಸಿದರು. ಇವರಿಬ್ಬರ ಉಪಕಾರದಿಂದ ನಾವೇ ಸಾಕ್ಷಾತ್ತಾಗಿ, ಲೋಕವನ್ನು ಪರಿಚಯಮಾಡಿದ್ದರೆ, ಎಷ್ಟು ಆನಂದವನ್ನು ಹೊಂದುತ್ತಿದ್ದೆವೋ ಅದಕ್ಕಿಂತ ಅನೇಕ ಪಾಲು ಹೆಚ್ಚಾದ ಆನಂದವನ್ನು ಪಡುವೆವು. ಯಾತಕ್ಕೋಸ್ಕರ ಆನಂದವು ಹೆಚ್ಚಾಗಿ ಹುಟ್ಟುವುದು? ಸಾಕ್ಷಾದ್ದರ್ಶನದಲ್ಲಿ ಹುಟ್ಟಿದಷ್ಟೇ ಅಥವಾ ಕಡಿಮೆಯಾಗಿಯೇ ಇರಬೇಕಲ್ಲವೇ? ಸ್ವಲ್ಪ ಯೋಚಿಸಿದರೆ ಹೆಚ್ಚಾಗಿಯೇ ಉಂಟಾಗಬೇಕು, ಎಂದು ತಿಳಿದು ಬರುವುದು. ನಾವು ಪ್ರಕೃತಿಯ ಯಾವ ಭಾಗವನ್ನು ನೋಡಬೇಕು? ಆನಂದ ಹುಟ್ಟುವುದಕ್ಕೆ ಅದನ್ನು ಹೇಗೆ ಪರಿಚಯ ಮಾಡಬೇಕು? ಎಂಬುದನ್ನು ಅರಿಯೆವು. ಬೆಟ್ಟದ ಮೇಲೆ ಸೂರ್ಯೋದಯದಲ್ಲಿ ಎಳಬಿಸಲು ಹಸುರಾದ ಹುಲ್ಲಿನ ಮೇಲೆ ಬೀಳುತ್ತಿದ್ದರೂ ಅನೇಕವೇಳೆ ಅದನ್ನು ನೋಡಿ ಆನಂದ ಪಡಲಿಲ್ಲ. ಬೆಕ್ಕು ಬಟ್ಟಲಿನಲ್ಲಿ ಹಾಲು ಕುಡಿಯುವುದನ್ನು ನೋಡಿ ಸುಖ ಹೊಂದಲಿಲ್ಲ. ಮಕ್ಕಳು ಅಂಗಳದಲ್ಲಿ ಕುಣಿಕುಣಿದಾಡುತ್ತ ಕೈತಪ್ಪಳೆ ಹಾಕುತ್ತ ಆಡುವದರ ಕಡೆಗೆ ನಮ್ಮ ಲಕ್ಷ್ಯವು ಹೋಗಲಿಲ್ಲ. ಚಿತ್ರಿಕರೂ, ಶಿಲ್ಪಿಕರೂ, ಅಂಥ ನೋಟಗಳನ್ನು ತೋರಿಸಿ, "ಬುದ್ಧಿಯಿಲ್ಲದ ಜಂತುಗಳೇ, ನೀವು ಏಕೆ ಕಣ್ಣುಗಳನ್ನು ಹೊಂದಿರುವಿರಿ? ಭಗವಂತನು ದಯೆಪಾಲಿಸಿದ ಕಣ್ಣನ್ನೂ ಉಪಯೋಗಿಸದೆ, ಏಕೆ ವ್ಯರ್ಥ ಮಾಡುವಿರಿ?" ಎಂದು ನಮ್ಮನ್ನು ಶಿಕ್ಷಿಸಿ ಆ ನೋಟಗಳನ್ನು ನೋಡುವಂತೆ ಮಾಡಿ ಬಲಾತ್ಕರಿಸಿ, ಆ ಸುಖಗಳನ್ನು ಅನುಭವಿಸುವಂತೆ ಮಾಡಿರುವರು. ಅವರ ಶಿಕ್ಷೆಯಿಂದ ಶಿಕ್ಷಿತರಾದ ಮೇಲೆಯಲ್ಲವೇ ನಾವು ನಮ್ಮ ಮನೆಗಳ ಮೂಲೆಗಳಲ್ಲಿ

ಮೇಜುಗಳ ಮೇಲೆ ಬೊಂಬೆಗಳನ್ನು ಇಟ್ಟು ಗೋಡೆಗಳಲ್ಲಿ ಚನ್ನಾಗಿ ಕಾಣುವ ಸ್ಥಳಗಳಲ್ಲಿ ಚಿತ್ರಪಠಗಳನ್ನು ಕಟ್ಟಿ ಆನಂದಪಡುವೆವು. ಪ್ರಕೃತಿಗೆ ಸಮಾನಾಕಾರವಾದ ಬೊಂಬೆಯಲ್ಲಿಯೂ, ಚಿತ್ರಪಠಗಳಲ್ಲಿಯೂ, ಸಾಕ್ಷಾತ್ ದರ್ಶನದ ಅನುಭವವೂ, ಆ ಅನುಭವದ ಅತಿಶಯವಾದ ಆನಂದವೂ ಉಂಟಾಗದಿದ್ದರೆ ಯಾರೂ ಹಾಗೆ ಮಾಡುತ್ತಿರಲಿಲ್ಲ! ಮತ್ತು ಮತ್ತೊಂದು ವಿಷಯವನ್ನು ಯೋಚಿಸಿರಿ. ಚಿತ್ರಿಕರ ಮತ್ತು ಶಿಲ್ಪಿಕರ ಕಲಾವ್ಯಾಪಾರವೂ, ಅದರ ಫಲವೂ, ಪರಿಚಯಾನುಭವದ ಸ್ಮರಣ ವೇಳೆಗೆ ಸದೃಶವಾದದ್ದೆಂದು ಹೇಳಬೇಕಾಗಿಲ್ಲ. ಆದ್ದರಿಂದ ಈ ಕಲಾನಿಪುಣರ ಸಾಮರ್ಥ್ಯವನ್ನು ನಾವು ಕೊಂಡಾಡುತ್ತಿರುವೆವು. ಇವರಿಬ್ಬರೂ ನೇತ್ರೇಂದ್ರಿಯ ಸುಖದಾನದಲ್ಲಿಯೇ ಪ್ರವೃತ್ತರಾದರು. ಇವರ ಉಪಕಾರಕ್ಕೆ ಇವರ ಕಲೆಯ ಸಾಮರ್ಥ್ಯಪ್ರದರ್ಶಕವಾದ ಚಿತ್ರಾದಿಗಳನ್ನು ಮನೆಯಲ್ಲಿ ಇಟ್ಟುಕೊಂಡು ಗೌರವಿಸುವ ನಮ್ಮ ಕೃತಜ್ಞತೆಯೇ ಸಾಕು. ಇವರು ಉಪಕಾರ ಹೊಂದಿದ ನಮ್ಮಿಂದ ಇನ್ನು ಹೆಚ್ಚಾದ ಕೃತಜ್ಞತೆಯನ್ನು ಅಪೇಕ್ಷಿಸರು.

ನೇತ್ರೇಂದ್ರಿಯ ದ್ವಾರಾ ಉಪಕರಿಸಿದ ಚಿತ್ರಿಕಶಿಲ್ಪಿಕರಂತೆ ಇತರ ಇಂದ್ರಿಯಗಳ ಮುಖಾಂತರ ಉಪಕಾರಮಾಡಲು ಪ್ರವರ್ತಿಸಿದವರೂ ಇರುವರೇ? ಎಂದು ಕೇಳಿದರೆ ಇರುವರು, ಎಂದು ಹೇಳಬಹುದು. ಅವರ ಉಪಕಾರವು ಇವರ ಉಪಕಾರದಷ್ಟು ಪ್ರಬಲವಾಗಿ ಇಲ್ಲ. ಅವರು ಯಾರೆಂದರೆ:—ಗಾನಕಲಾನಿಪುಣರಾದ ಗಾಯಕರೂ, ಸೂಪಶಾಸ್ತ್ರಪ್ರವರ್ತಕರೂ. ಶ್ರೋತ್ರೇಂದ್ರಿಯ ಪಾಟವವೈಶದ್ಯವನ್ನು ಪಡೆದ ಮಹಾಶಯರು, ತಾವು ಅರಣ್ಯದಲ್ಲಿ ಕೇಳಿದ, ಪಕ್ಷಿ, ಪಶು, ಮೃಗಾದಿಗಳ ಸ್ವರಗಳನ್ನೂ, ಲತಾವೃಕ್ಷಾದಿಗಳ ಚಲನಾವ್ಯಾಪಾರಗಳಲ್ಲಿ ಹುಟ್ಟುವ ಧ್ವನಿಗಳನ್ನೂ ಕೇಳಿಯೂ, ಪೂರ್ವಕಾಲದಿಂದ ಪ್ರಚಾರದಲ್ಲಿ ಬಂದ ಅಪೌರುಷೇಯವಾದ ವೇದವಾಕ್ಯಗಳನ್ನೂ ಕೇಳಿಯೂ, ಅವನ್ನು ಕೇಳಿದಾಗ ತಾವು ಅನುಭವಿಸಿದ ಸುಖವನ್ನು ಇತರರಿಗೆ ದಾನಮಾಡಬೇಕೆಂದು, ಅವುಗಳ ಧ್ವನಿಗಳ ಅನುಕಾರವನ್ನು ಏರ್ಪಡಿಸಿದುದೂ ಅಲ್ಲದೆ ಪಕ್ಷಿಮೃಗಾದಿಗಳ ಧ್ವನಿಗಳನ್ನೂ ವಿವೇಚನೆಮಾಡಿ ಕಂಡುಹಿಡಿದ ಸಪ್ತಸ್ವರಗಳ ಸಮ್ಮೇಳನದಿಂದ ಆ ಸುಖವು ಮತ್ತಿಷ್ಟು ಹೆಚ್ಚುವುದೆಂದು ಯೋಚಿಸಿ, ಆ ಸಮ್ಮೇಳನ ಪ್ರಕಾರವಾದ ರಾಗಗಳನ್ನು ಕಲ್ಪಿಸಿ, ಆ ರಾಗಗಳನ್ನು ತಾವೇ ಹಾಡಿದಾಗ ತಮ್ಮ ಹೃದಯದಲ್ಲಿ ಉಂಟಾದ ಹರ್ಷವಿಕಾಸವನ್ನು ಶಿಷ್ಯರಿಗೆ ಉಪ

ದೇಶಮಾಡಿದರು. ಆ ರಾಗಗಳು ಈಗಲೂ ಪರಂಪರೆಯಾಗಿ ಬರುತ್ತ ಸರ್ವತ್ರ ನೊಳಗುತ್ತಿವೆ. ಆ ರಾಗಗಳನ್ನೂ ತಂತಿಗಳುಳ್ಳ ವಾದ್ಯಗಳೂ, ಚರ್ಮಸಹಿತವಾದ ವಾದ್ಯಗಳೂ, ಇತರ ವಿಧವಾದ ವಾದ್ಯಗಳೂ, ಈ ವಿಧವಾದ ವಾದ್ಯಗಳನ್ನೂ ನಿರ್ಮಿಸಿ ಗಾನಕುಶಲರಿಗೆ ಸಹಾಯಮಾಡಲು ಕೆಲವರು ಹೊರಟರು. ಅವರೂ ಈ ಗಾನಕುಶಲರ ಗೋಷ್ಠಿಯಲ್ಲಿ ಸೇರುವರು. ಅವರು ಆ ರಾಗಗಳನ್ನು ತಮ್ಮ ಕಂಠ ದಿಂದ ಹೊರಡಿಸಿದರು. ಇವರು ವಾದ್ಯಗಳಿಂದ ಹೊರಡಿಸಿದರು. ಅವರ ಸಾಮರ್ಥ್ಯ ಕ್ಕಿಂತ ಇವರ ಸಾಮರ್ಥ್ಯವು ಹೆಚ್ಚು. ಇವರು ಅವರ ಸಾಮರ್ಥ್ಯವನ್ನು ಹೊಂದದಿ ದ್ದರೆ ಆ ವಾದ್ಯಗಳನ್ನು ನಿರ್ಮಿಸಲಾರರು.

ಈ ಸಂಗೀತಜ್ಞರು ಎಷ್ಟೆಷ್ಟು ಶ್ರಮಪಟ್ಟು ಕೇಳುವವರ ಹೃದಯದಲ್ಲಿ ಆನಂದಪರವಶತೆಯನ್ನು ಹುಟ್ಟಿಸಿದರೂ, ಒಂದು ಕೊರತೆಯು ತೋರಿಬಂದಿತು. ಆಯಾ ರಾಗಗಳು ಆಪ್ಯಾಯಕರೂಪವಾದ ಬರೀ ಧ್ವನಿಗಳ ಸಮುದಾಯವಾಗಿ ದ್ದಿತು. ಬರೀ ಸ್ವರಜತಿಗಳು ಮಾತ್ರವೇ ಇದ್ದರೆ, ರಾಗದ ಆಲಾಪನೆಯು ಎಷ್ಟು ಆನಂದವನ್ನು ಕೊಡುವದೋ ಅರ್ಥಬೋಧಕವಾದ ಪದಸಮುದಾಯದಿಂದ ಆ ಸ್ವರಜತಿಗಳು ಹುಟ್ಟಿದರೆ, ಆ ರಾಗವು ಮತ್ತಿಷ್ಟು ಹೆಚ್ಚಾದ ಆನಂದವನ್ನು ಕೊಡು ವುದು. ರಾಗದಲ್ಲಿ ಅಭಿಪ್ರಾಯ ಬೋಧಕವಾದ ಪದರಾಶಿಯಿದ್ದಲ್ಲಿ ಅದರ ರಾಮ ಣೀಯಕತೆಯು ಹೆಚ್ಚುವುದೆಂದು ಎಲ್ಲರೂ ಬಲ್ಲರು. ಅದಕ್ಕಾಗಿ ರಾಗದೊಡನೆ ಸಾಹಿತ್ಯವನ್ನು ಜೋಡಿಸಿ ಕೀರ್ತನೆಗಳನ್ನು ಕಲ್ಪಿಸಿದರು. ಶ್ರೋತ್ರೇಂದ್ರಿಯದ ಮೂಲಕ ಸುಖವನ್ನು ಇತರರಿಗೆ ದಾನಮಾಡಬೇಕೆಂದು ಉದ್ದೇಶಿಸಿದ ಮಹಾ ತ್ಮರುಗಳು ಕೀರ್ತನೆಗಳನ್ನು ಬರೆದಿಟ್ಟು ಶಿಷ್ಯರಿಗೆ ಬೋಧಿಸಿದರು ಈಗ ಪ್ರಚಾರ ದಲ್ಲಿರುವ ಕೀರ್ತನೆಗಳಲ್ಲಿ ಸಂಗೀತ ಸಾಹಿತ್ಯಗಳು ಪ್ರಾಯಶಃ ಕಲೆತೇ ಇರುವುವು. ಇವರ ದಾನಕ್ಕೆ ಪಾತ್ರರಾದವರು ಬಹುಮಂದಿ. ಇವರ ದಾನಕ್ಕೆ ಶ್ರೋತ್ರೇಂದ್ರಿಯ ಪಾಟವವುಳ್ಳ ಸಮಸ್ತ ಪ್ರಾಣಿಯೂ ಅರ್ಹವಾದದ್ದು. ಇತರೇಂದ್ರಿಯಗಳಿಗಿಂತ ಶ್ರೋತ್ರೇಂದ್ರಿಯದ ಸುಖವನ್ನು ಅನುಭವಿಸಲು ಅಷ್ಟು ಪರಿಶ್ರಮವು ಬೇಕಿಲ್ಲದೆ, ಇರುವುದರಿಂದ, "ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿಗಾನರಸಂ ಫಣೀ" ಎಂಬ ಮರ್ಯಾದೆಯಲ್ಲಿ ಶ್ರೋತ್ರೇಂದ್ರಿಯದ ಮೂಲಕವಾಗಿ ಹುಟ್ಟುವ ಸುಖವು ಮನು ಷ್ಯನೇ ಮೊದಲಾಗಿ ಅನೇಕ ಪ್ರಾಣಿಗಳಿಗೆ ಅನುಭವವೇದ್ಯವಾಗಿರುವುದು. ಆದ್ದ

ರಿಂದ ಈ ಗಾನಕಲಾಕುಶಲರ ಉಪಕಾರದ ಸುಖವನ್ನು ಎಲ್ಲರೂ ತಿಳಿಯ ಬಲ್ಲರು. ಇತರೇಂದ್ರಿಯಗಳ ಸುಖಕ್ಕೆ ಆಯಾ ಇಂದ್ರಿಯಗಳಿಗೆ ಸಂಬಂಧಪಟ್ಟ ಕಲೆಗಳಲ್ಲಿ ಪರಿಶ್ರಮವು ಹೆಚ್ಚಿದ ಹಾಗೆಲ್ಲಾ ಸುಖವೂ ಹೆಚ್ಚುವಂತೆ ಈ ಕಲೆಯಲ್ಲಿಯೂ ಹೆಚ್ಚುವುದು.

ರಸನೇಂದ್ರಿಯದ ಸುಖದಲ್ಲಿ ಪ್ರವರ್ತಿಸಿದ ಸೂಪಕಲಾನಿಪುಣರು ಎಷ್ಟೋ ಪ್ರವರ್ತಿಸಿ ತಾವು ಪಟ್ಟಸುಖವನ್ನು ಹಿಂದೆ ಹೇಳಿದ ಕಲಾಜ್ಞರಂತೆ ಇತರರಲ್ಲಿ ಶ್ರಮಾಪೇಕ್ಷೆಯಿಲ್ಲದೆ, ಹುಟ್ಟಿಸಬೇಕೆಂದು ಯತ್ನಿಸಿದರೂ ಸಾಧ್ಯವಾಗದೆ ಹೋಯಿತು. ಆದ್ದರಿಂದ ಆ ಕಲಾಪ್ರವರ್ತಕರೂ ಹಿಂದೆ ಹೇಳಿದ ಮಹನೀಯರಷ್ಟು ಯಶಸ್ಸಿಗೆ ಬರಲಿಲ್ಲ. ಇವರು "ನಾವು ರಸನೇಂದ್ರಿಯ ದ್ವಾರಾ ಅನುಭವಿಸಿದ ಸುಖವನ್ನು ಶ್ರಮಪಡದೆ ನೀವೂ ಅನುಭವಿಸಿರಿ." ಎಂದು ದಾನಮಾಡುವದಕ್ಕೆ ಆಗದೆ ಹಿಂಜರಿದರು. "ನೀವೂ ಪಚನ ಪದಾರ್ಥಗಳನ್ನು ಕೂಡಿಟ್ಟು ನಾವು ಹೇಳಿದ ರೀತಿಯಲ್ಲಿ ಪಾಕಗಳನ್ನು ಮಾಡಿ ಊಟಮಾಡಿರಿ" ಎಂದು ಹೇಳಬೇಕಾಯಿತು. ಪಾಕಮಾಡುವುದರಲ್ಲಿ ಹೆಚ್ಚು ಕಡಿಮೆಯಾದರೂ, ಪದಾರ್ಥಗಳ ಪ್ರಮಾಣದಲ್ಲಿ ಹೆಚ್ಚು ಕಡಿಮೆಯಾದರೂ ಅಡಿಗೆ ರುಚಿಸದು. ಮತ್ತು ಭೇದಿಸುವುದು. ರಸವತ್ತಾದ ಪದಾರ್ಥಗಳು ದೇಶದೇಶಗಳಲ್ಲಿ ಭಿನ್ನವಾಗಿರುವುವು. ಪ್ರಕೃತಿಧರ್ಮವು ದೇಶದೇಶಕ್ಕೆ ಬೇರೆ ಬೇರೆಯಾಗಿರುವುದು. "ಲೋಕವಾದರೋ ಭಿನ್ನರುಚಿಯು" ಇದೂ ಅಲ್ಲದೆ ಈ ರಸನೇಂದ್ರಿಯದ ಸುಖವನ್ನು ಅನುಭವಿಸುವುದಕ್ಕೆ ಆಹಾರ ಸಾಮಗ್ರಿಗಳನ್ನು ಜತೆಗೊಳಿಸುವುದರಲ್ಲಿಯೂ, ಭಕ್ಷ್ಯಾದಿಗಳನ್ನು ಸಿದ್ಧಪಡಿಸುವುದರಲ್ಲಿಯೂ, ವಿಶೇಷ ಶ್ರಮವೂ ಸಹನೆಯೂ ಬೇಕು. ಧನ, ಜನ, ಸಹಾಯ ಸಂಪತ್ತಿಯೂ ಅಪೇಕ್ಷಿತವಾಗಿರುವುದು. ಇಷ್ಟು ತೊಡಕಿರುವದರಿಂದ ರಸನೇಂದ್ರಿಯ ಸುಖಕ್ಕಾಗಿ ಹೊರಟ ಕಲೆಯು ಉತ್ತಮ ಕಲೆಯೆಂದು ಗಣನೆಗೆ ಬರಲಿಲ್ಲ. ಈ ಕಲೆಯಂತೆಯೇ ನಾಸಿಕೇಂದ್ರಿಯದ ಮೂಲಕ ಸುಖದಾನವನ್ನು ಮಾಡಲು ಪ್ರವರ್ತಿಸಿದ ಕಲೆಯೂ ಅಷ್ಟು ಪ್ರಸಿದ್ಧಿಗೆ ಬರಲಿಲ್ಲ. ಈ ಕಲೆಯಲ್ಲಿ ಪ್ರವರ್ತಿಸಿದವರು ಗಂದಿಗರು, ಮಾಲಾಕಾರರು; ಇವರ ಪರೋಪಕಾರ ಯತ್ನದಲ್ಲಿಯೂ ಸೂಪಕಲಾಪರಿಶ್ರಮಜನ್ಯಸುಖವನ್ನು ಅನುಭವಿಸುವುದರಲ್ಲಿ ಉಂಟಾದ ಶ್ರಮವೂ, ಧನ, ಜನಸಹಾಯ ಸಂಪತ್ತಿಯೂ ಅಪೇಕ್ಷಿತವಾಗಿರುವುದು. ಈ ಕಲೆಯು ಸೂಪಕಲೆಯಂತೆ ಅತ್ಯಧಿಕವಾದ ಶ್ರಮಸಾಧ್ಯವಾಗಿಯೂ ಸಾಮಾನ್ಯವಾಗಿ ಅನುಭವಕ್ಕೆ ತರಲು ಕಷ್ಟವಾಗಿಯೂ ಧನಿಕರಾದ ಕೆಲವರಿ

ಗೇನೆ ಅನುಭವ ಸಾಧ್ಯವಾಗಿರುವದರಿಂದಲೂ ಇವುಗಳ ವಿಚಾರವನ್ನು ಇಷ್ಟಕ್ಕೆ ಸಾಕು ಮಾಡುವೆನು.

ಮೇಲೆ ನಿರೂಪಿಸಿದ ಜ್ಞಾನೇಂದ್ರಿಯ ಪಂಚಕಗಳ ದ್ವಾರಾ ಸುಖ ಹೆಚ್ಚಿಸಿ, ಲೋಕವನ್ನು ಉದ್ಧಾರ ಮಾಡಲೆಂದು ಪ್ರವರ್ತಿಸಿದ ಕಲೆಗಳಷ್ಟರಲ್ಲಿಯೂ ಪರ್ಯಾಲೋಚನೆ ಮಾಡಿದಲ್ಲಿ ಪ್ರಬಲವಾದ ಎರಡು ಕೊರತೆಗಳು ಕಂಡುಬರುತ್ತಿವೆ. ಆ ಕಲಾಜ್ಞರು ಎಷ್ಟೆಷ್ಟೋ ಯತ್ನಿಸಿದರೂ, ಆ ಕೊರತೆಗಳನ್ನು ನಿವಾರಿಸಲಾರದೆ ಹೋದರು. ಮುಖ್ಯವಾಗಿ ಚಿತ್ರಿಕರ ಮತ್ತು ಗಾನಜ್ಞರ ಕಲಾನೈಪುಣ್ಯವಿಷಯದಲ್ಲಿ ಆ ಕೊರತೆಗಳನ್ನು ನಿರೂಪಿಸುವೆನು. ಪ್ರಪಂಚವು ಚರಾಚರಾತ್ಮಕವಾಗಿಯೇ ಇರುವುದಷ್ಟೆ ? ಚಿತ್ರಿಕರ ಮತ್ತು ಶಿಲ್ಪಿಕರ ನೈಪುಣ್ಯವು ನಿಂತಿರುವ ಚಲಿಸದ ವಸ್ತುವಿನ ಸ್ಥಿತಿಯನ್ನು ತೋರಿಸುವದರಲ್ಲಿ ನಿಂತುಹೋಯಿತು. ಚಲನಾತ್ಮಕ ವ್ಯಾಪಾರವನ್ನು ನಿರೂಪಿಸುವದರಲ್ಲಿ ಹೊರಟರೂ ವಸ್ತುಗಳಲ್ಲಿ ಏಕಕ್ಷಣಾವಚ್ಛಿನ್ನವಾದ ಎಂದರೆ ಒಂದು ಕ್ಷಣಕಾಲ ಮಾತ್ರದಲ್ಲಿ ಕಣ್ಣಿಗೆ ಗೋಚರವಾದ ರೂಪಾದಿಗಳನ್ನು ತೋರಿಸಬಲ್ಲದು. ತಥಾಚ ಅವರ ಸಾಮರ್ಥ್ಯವು ವಸ್ತುಗತವಾದ ಚಲನಾತ್ಮಕ ವ್ಯಾಪಾರವನ್ನು ಯಥಾವತ್ತಾಗಿ ತೋರಿಸಲಾರದೆ ಹೋಯಿತು. ಈ ನ್ಯೂನತೆಯನ್ನು ಯೋಚಿಸಿ ತತ್ವಶಾಸ್ತ್ರಜ್ಞರಲ್ಲಿ ಕೆಲವರು ಬಹು ಕಾಲದಿಂದ ಶ್ರಮಪಡುತ್ತಿದ್ದು ಕೊನೆಗೆ ಈ ಕಲೆಗಳ ನ್ಯೂನತೆಯನ್ನು ಹೋಗಲಾಡಿಸಿದರು. ಚಿತ್ರಿಕರ ಶ್ರಮವನ್ನು ಹೋಗಲಾಡಿಸಲು ಛಾಯಾಗ್ರಾಹಿಯ ಯಂತ್ರವನ್ನು ನಿರ್ಮಾಣಮಾಡಿದರು. ಇವರು ಚಿತ್ರಿಕರ ಶ್ರಮವಷ್ಟನ್ನು ಹೋಗಲಾಡಿಸಿದುದಲ್ಲದೆ ಅವರ ಕೈಯಿಂದ ಆಗದ ವಿಷಯಗಳನ್ನು ಮಾಡಿದರು. ಛಾಯಾಗ್ರಾಹಿಯ ಯಂತ್ರದಲ್ಲಿ ಒಂದು ಮಹತ್ವವುಂಟು. ಅದನ್ನು ತಮಗೆ ತಿಳಿಸುವೆನು. ಚಿತ್ರಿಕರು ತಾವು ನೋಡಿದುದನ್ನು ಮನಸ್ಸಿಗೆ ತಂದುಕೊಂಡು ಮನನಮಾಡಿ ಹಲಗೆಯ ಮೇಲೆ ಬಿಂಬಿಸಿ ಬರೆಯುತ್ತಿದ್ದರು. ಆ ಕಾರ್ಯ ನಿರ್ವಾಹಕ್ಕೆ ಎಷ್ಟು ನಿಪುಣತೆ ಎಷ್ಟು ಸಹನವಿರಬೇಕು. ಆ ಸಹನವೂ ಆ ನಿಪುಣತೆಯೂ ಸಾಮಾನ್ಯರಿಗೆ ಸಾಧ್ಯವಲ್ಲ. ಒಬ್ಬಿಬ್ಬರಿಗೆ ಸಾಧ್ಯವಾದರೆ ಹೆಚ್ಚು. ಹಾಗೆ ನೋಡಿದರೆ ಅಂಥ ನಿಪುಣತೆಯುಳ್ಳ ಮಹಿಮರು ಒಂದು ದೇಶಕ್ಕೆ ಇಬ್ಬರಿದ್ದರೆ ಹೆಚ್ಚು. ಅದರಲ್ಲಿ ಪ್ರಕೃತಿ ಸಮನಾಗಿ ಪ್ರತಿಕೃತಿಯನ್ನು ವಿನ್ಯಾಸ ಮಾಡುವರು ಸಿಕ್ಕುವುದು ಅಪರೂಪ. ಛಾಯಾಗ್ರಾಹಿ ಯಂತ್ರದ ಸಹಾಯದಿಂದ ನೋಡಿದ ನೋಟವೆಲ್ಲವನ್ನೂ ಪ್ರತಿಬಿಂಬಿಸಬಲ್ಲರು. ಚಿತ್ರಕರ್ಮ ಚಕ್ರವರ್ತಿಗಳ ಆಧಿಪತ್ಯಕ್ಕೆ ಒಳಗಾಗದ ಪ್ರದೇಶ

ಗಳ ಬಿಂಬವನ್ನೂ ತರಬಹುದು. ಇಳಿಯುವುದಕ್ಕೆ ಆಗದ ಕಮರಿಯನ್ನೂ, ಹತ್ತುವುದ ಕ್ಕಾಗದ ಬೆಟ್ಟವನ್ನೂ, ಕ್ರೂರಜಂತುಗಳಿಗೆ ಆವಾಸವಾದ ಅರಣ್ಯವನ್ನೂ ಚಿತ್ರದಲ್ಲಿ ತೋರಿಸಬಹುದು. ಚಿತ್ರಕರ್ಮದ ನ್ಯೂನತೆಯನ್ನು ಶಿಲ್ಪಕರ್ಮವು ನಿವಾರಿಸಿದ ಹಾಗೆ ಛಾಯಾಗ್ರಾಹಿಯ ನ್ಯೂನತೆಯನ್ನು ಸಿನಿಮಿಟೋಗ್ರಾಫ್ ಹೋಗಲಾಡಿಸಿತು. ಇದರಂತೆ ಗ್ರಾಮಫೋನ್ ಎಂಬ ರಾಗಗ್ರಾಹಿಯಂತ್ರವು ಸಂಗೀತಕಲೆಯ ಕೊರತೆ ಯನ್ನು ಹೋಗಲಾಡಿಸಿ, ಆ ಕಲೆಯ ಆನಂದವನ್ನು ಸರ್ವರಿಗೂ ದಾನಮಾಡಿತು. ಸಮರ್ಥನಾದ ಸಂಗೀತಜ್ಞನ ಹಾಡನ್ನು ಎಲ್ಲರಿಗೂ ಕೇಳಲು ಸುಲಭವಲ್ಲ. ಅಂಥ ವನು ಎಲ್ಲ ದೇಶಗಳಲ್ಲಿಯೂ ಇರುವುದಿಲ್ಲ. ಎಲ್ಲಾ ಕಡೆಗೂ ಬರುವುದಿಲ್ಲ. ಎಲ್ಲಾ ಕಡೆಯಲ್ಲಿಯೂ, ಎಲ್ಲಾ ವೇಳೆಯಲ್ಲಿಯೂ ಹಾಡುವುದಿಲ್ಲ. ಎಲ್ಲೋ ಒಬ್ಬಿಬ್ಬರು ಧನಿಕರು ಕೇಳುವರು, ಅವರ ಎದುರಿಗೆ ಹಾಡುವನು. ಅಂಥ ಮಹಾತ್ಮನು ಹಾಡಿದ ಗಾನದ ಪರಿಪಾಟಿಯನ್ನು ರಾಗಗ್ರಾಹಿಯ ಮೂಲಕ ಎಲ್ಲಾ ದೇಶದ ಬಡವರೂ, ಧನಿಕರೂ ತಮಗೆ ಇಷ್ಟ ಬಂದ ವೇಳೆಯಲ್ಲಿ ಕೇಳಿ ಆನಂದ ಪಡಬಹುದಾಯಿತು. ಆ ಮಹಾನುಭಾವನು ಸತ್ತರೂ ಅವನ ಹಾಡೂ, ಅವನ ಶಾರೀರವೂ ಚಿರಸ್ಥಾಯಿ ಯಾಯಿತು. ಒಬ್ಬನ ಧ್ವನಿಯನ್ನು ಅನುಕಾರ ಮಾಡಲು ಅಸಾಧ್ಯವಾಗಿತ್ತು. ಅದೂ ಸಾಧ್ಯವಾಯಿತು. ವಾದ್ಯಗಳ ಮೇಳದಲ್ಲಿ ಉಂಟಾಗುವ ರಾಗದ ಜಮಾವಣೆಯು ಒಂದು ಯಂತ್ರದಿಂದಲೇ ಆಗುವ ಹಾಗೆ ಆಯಿತು. ಇದೆಲ್ಲವೂ ಪ್ರಕೃತಿ ಶಾಸ್ತ್ರಜ್ಞರ ಉಪಕಾರವಲ್ಲವೇ? ಅವರ ಆ ಉಪಕಾರಕ್ಕೆ ಅವರನ್ನು ನಾವು ಎಷ್ಟು ಗೌರವಿಸಿ ದರೂ ತೀರದು.

ಏವಂಚ ಏನು ಹೇಳಿದ ಹಾಗಾಯಿತು:----ಹಿತೈಷಿಗಳು ಲೋಕೋಪಕಾರ ಬುದ್ಧಿಯಿಂದ ತಾವು ಅನುಭವಿಸಿದ ಸುಖಾನುಭವಗಳು ಬಹುಕಾಲ ನಿಲ್ಲುವಂತೆಯೂ ಸಕಲರಿಗೂ ಸುಲಭವಾಗಿ ಅನುಭವಿಸುವಂತೆಯೂ, ಉಪಾಯಗಳನ್ನು ಕಲ್ಪಿಸಿದರು. ಕಣ್ಣಿಗೆ ತಿಳಿಯುವ ಮರ, ಬೆಟ್ಟ, ಜಲಪಾತ ಮೊದಲಾದುವುಗಳನ್ನು ಚಿರಸ್ಥಾಯಿ ಯಾಗಿ ನಿಲ್ಲುವಂತೆ ಮಾಡುವ ಉದ್ದೇಶದಿಂದ ಚಿತ್ರಿಕರು ಅವುಗಳನ್ನು ಹಲಿಗೆಗಳ ಮೇಲೆ ತೋರಿಸಿದರು. ಈ ಚಿತ್ರಕರ್ಮದ ಕೆಲವು ಕೊರತೆಗಳನ್ನು ಶಿಲ್ಪಕಲಾನಿಪು ಣರು ನಿವಾರಿಸಿದರು. ಸ್ವರ ಪರಂಪರೆಯಾದ ರಾಗವು ಚಿರಸ್ಥಾಯಿಯಾಗಿ ನಿಲ್ಲಲು ಸಂಗೀತ ಕಲಾನಿಪುಣರು ಮಾಡಿದ ಉಪಾಯವು ತಿಳಿದೇ ಇದೆ. ಇತರ ಇಂದ್ರಿಯ ಗಳ ಅನುಭವ ಸುಖವನ್ನು ಚಿರಕಾಲ ನಿಲ್ಲಿಸುವುದಕ್ಕೆ ಆಯಾ ಕಲಾಪ್ರವೀಣರ್ು

ಮಾಡಿರುವ ಉಪಾಯಗಳೂ ಅದರಿಂದ ಅವರು ತೋರಿಸಿದ ನೈಪುಣ್ಯವೂ, ಅದರ ವಿಮರ್ಶೆಯಿಂದ ಲೋಕಕ್ಕೆ ಉಂಟಾದ ಸುಖಪರಂಪರೆಯೂ ಬಹಳ ಹೇಳಬೇಕಾಗಿವೆ. ಅವುಗಳಷ್ಟನ್ನೂ ಇಲ್ಲಿ ಹೇಳಬೇಕಾಗಿಲ್ಲ. ಈ ಮಹನೀಯರು ಇಷ್ಟೊಂದು ಸೌಕರ್ಯವನ್ನೂ ಅನುಭವ ಪರೀವಾಹವನ್ನೂ ಉಪಕಾರ ಮಾಡುತ್ತಿದ್ದರೂ ಅವರ ಉಪಕಾರವೆಲ್ಲವನ್ನೂ ಒಟ್ಟುಗೂಡಿಸಿದರೂ ಕವಿಯೆಂಬ ಮಹಾಪ್ರಾಜ್ಞನ ಸಾಮರ್ಥ್ಯ ಪ್ರಭಾವ ಮತ್ತು ಉಪಕಾರದ ಒಂದು ಅಂಶವನ್ನು ಹೋಲಲಾರದು ಎಂದು ದೃಢವಾಗಿ ಹೇಳಬಹುದು.

ಚಿತ್ರಿಕನು ತನ್ನ ಅನುಭವವನ್ನು ಮತ್ತೊಬ್ಬನಿಗೆ ಕೊಡಲು ಇಷ್ಟಪಟ್ಟರೆ ಅಂಥದರ ಪ್ರತಿಕೃತಿಯನ್ನು ತಂದು ಅವನ ಕಣ್ಣಿನ ಮುಂದೆ ಹಿಡಿಯಬೇಕು. ಹಿಡಿಯದಿದ್ದರೆ ಸಾಧ್ಯವಿಲ್ಲ. ಏಕೆ? ನೇತ್ರೇಂದ್ರಿಯ ಸುಖವನ್ನು ನೇತ್ರೇಂದ್ರಿಯದ ಮೂಲಕವಾಗಿಯೇ ಹುಟ್ಟಿಸಬೇಕು. ರಾಗಜ್ಞನು ಕರ್ಣೇಂದ್ರಿಯ ಸುಖವನ್ನು ತಾನು ಯಾವರಾಗದಿಂದ ಪಡೆದನೋ ಆ ರಾಗವನ್ನೇ ಮತ್ತೊಬ್ಬನ ಎದುರಿಗೆ ಹಾಡಿ ಅಥವಾ ಹಾಡಿಸಿ ಅನುಭವಿಸಿಸಬೇಕು. ರಸಕಲಾಜ್ಞನು ತಾನು ಅನುಭವಿಸಿದ ರಸನೇಂದ್ರಿಯ ಸುಖವನ್ನು ಅಂಥ ಭಕ್ಷ್ಯಾದಿಗಳನ್ನು ಮಾಡಿ ತಿನ್ನಿಸಿ ಮತ್ತೊಬ್ಬನಿಗೆ ಕೊಡಬೇಕು. ಈ ರೀತಿಯಲ್ಲಿ ಆಯಾ ಇಂದ್ರಿಯ ಸುಖವನ್ನು ಆಯಾ ಇಂದ್ರಿಯದ ಮೂಲಕವಾಗಿಯೇ ಆಯಾ ಕಲಾಪ್ರವೀಣರು ತೋರಿಸಿ ಅನುಭವಿಸಿಸಬೇಕು. ಒಂದು ಇಂದ್ರಿಯದ ಸುಖವನ್ನು ಬೇರೊಂದು ಇಂದ್ರಿಯದ ಮೂಲಕ ತಿಳಿಸಲು ಆಗುವುದಿಲ್ಲ. ಪ್ರಕೃತಿ ಸ್ವಭಾವವೇ ಅಂಥದು ಒಂದು ಇಂದ್ರಿಯದ ಕಾರ್ಯವನ್ನು ಮತ್ತೊಂದು ಇಂದ್ರಿಯವು ಮಾಡುವುದಾದರೆ ಅಷ್ಟು ಇಂದ್ರಿಯಗಳ ಅವಶ್ಯಕತೆ ಇರಲಿಲ್ಲ. ಆಯಾ ಇಂದ್ರಿಯಗಳ ಸುಖವನ್ನು ಇತರರು ಅನುಭವಿಸುವಂತೆ ಮಾಡುವಲ್ಲಿ ಇಷ್ಟು ಕಲಾಪ್ರವೀಣರುಗಳ ಸಹಾಯಾವಶ್ಯಕತೆಯೂ ಬೇಕಾಗಿರಲಿಲ್ಲ.

ಇನ್ನು ಕವಿಯ ಮಹತ್ವದ ಕಡೆಗೆ ಸ್ವಲ್ಪ ತಿರುಗೋಣ. ಕವಿಯು ಭಗವಂತನ ಸೃಷ್ಟಿ ವೈಚಿತ್ರ್ಯವನ್ನು ಚೆನ್ನಾಗಿ ಪರಿಶೀಲಿಸಿದನು. ಅವನು ನಾಭಿಕಂಠಾದಿಸ್ಥಾನಗಳಲ್ಲಿ ಇರುವ ಒಂದು ಶಕ್ತಿ ವಿಶೇಷವನ್ನು ಅವಗಾಹಿಸಿ ಆ ಶಕ್ತಿಯ ಸಹಾಯ ಸಂಪತ್ತಿನಿಂದ ತನ್ನ ಸಾಮರ್ಥ್ಯವನ್ನು ಸರ್ವತ್ರ ಬೆಳಗಿ ಇತರ ಕಲಾನಿಪುಣರ ನೈಪುಣ್ಯವನ್ನು ಹೊಂದಿ ತಾನೇ ಹಿತೈಷಿಗಳ ಚಕ್ರವರ್ತಿ ಎನಿಸಿಕೊಂಡನು. ಕಂಠಾದಿಸ್ಥಾನಮತ್ತಾದ ಮುಖದಲ್ಲಿ ಶಬ್ದೋಚ್ಚಾರಣಶಕ್ತಿಯೊಂದುಂಟು. ಅದೇ ವಾಕಕ್ಕಿ

ಅಥವಾ ಮಾತನ್ನಾಡುವ ಸಾಮರ್ಥ್ಯವು. ಮಾತಿಗೆ ಅತ್ಯಾಶ್ಚರ್ಯಕರವಾದ ಒಂದು ಶಕ್ತಿಯುಂಟು. ಮಾತು ಲೋಕದಲ್ಲಿ ಇಂದ್ರಿಯಗಳದ್ವಾರಾ ಪ್ರತ್ಯಕ್ಷವಾದ ಪ್ರತ್ಯಕ್ಷವಾಗುವ ವಿಷಯಗಳನ್ನು ವಾಚಿಸುವದು, ಎಂದರೆ ಇಂದ್ರಿಯದ್ವಾರಾ ಪ್ರತ್ಯಕ್ಷವಾದ ವಿಷಯಗಳನ್ನು ಅಂತರಿಂದ್ರಿಯವಾದ ಮನಸ್ಸಿನಲ್ಲಿ ಪ್ರತಿಭಾಸಿಸುವುದು; ಎಂದರೆ ಹಿಂದೆ ಅನುಭವಿಸಿದ ಆ ವಿಷಯಗಳನ್ನು ಮನಸ್ಸಿನ ಮುಂದೆ ಪುನಃ ಎತ್ತಿತಂದು ತೋರಿಸುವುದು. ಇಂದ್ರಿಗಳಿಂದ ಪರಿಚಯು ಮಾಡಿದ ವಸ್ತುಗಳ ಸಂಸ್ಕಾರವು ಮನೋಭಿತ್ತಿಯಲ್ಲಿ ನಿಲ್ಲುವುದು. ನಿಂತರೂ ಅವ್ಯಕ್ತವಾಗಿಯೇ ನಿಲ್ಲುವುದು. ಎಂದರೆ ಮನಸ್ಸಿನಲ್ಲಿ ಆ ಸಂಸ್ಕಾರಗಳು ಸರ್ವಕಾಲದಲ್ಲಿಯೂ ಇರುವಂತೆ ತೋರಿಬರುವುದಿಲ್ಲ. ಆದರೂ ಅಲ್ಲಿ ಅವು ಇದ್ದೇ ಇರುವುವು. ಹಾಗೆ ಇರುವ ಆ ಸಂಸ್ಕಾರಗಳ ಸ್ಥಿತಿಯನ್ನು ಅವ್ಯಕ್ತಸ್ಥಿತಿಯೆಂದು ಕರೆಯುಬಹುದು. ಇಂದ್ರಿಯಗಳ ಮೂಲಕ ಹೊಂದಿದ ಪರಿಚಯಾನುಭವಗಳು ಆಯಾ ಶಬ್ದಗಳ ಶ್ರವಣದಿಂದ ಪುನಃ ವ್ಯಕ್ತವಾಗುವುವೆಂದರೆ, ಪ್ರತ್ಯಕ್ಷವೇಳೆಯಲ್ಲಿ ಚಿತ್ರ ಭಿತ್ತಿಯಲ್ಲಿ ಇಂದ್ರಿಯಗಳ ಮೂಲಕ ಪರಿಚಯು ಮಾಡಿದ ವಸ್ತುಗಳ ಚಿತ್ರವು ಶಬ್ದಶ್ರವಣ ಕಾಲದಲ್ಲಿ ಮನೋಭಿತ್ತಿಯಲ್ಲಿ ಹುಟ್ಟುವುದು. ಆ ಚಿತ್ರಕ್ಕೆ ಸಂಸ್ಕಾರವೆಂಬ ಶಬ್ದವನ್ನು ಉಪಯೋಗಿಸಿ ಚಿತ್ತಸಂಸ್ಕಾರವೆಂದು ಕರೆಯುಬಹುದು. ಆ ಸಂಸ್ಕಾರವು ಅವ್ಯಕ್ತಸ್ಥಿತಿಯಲ್ಲಿ ಚಿತ್ರಭಿತ್ತಿಯಲ್ಲಿ ಅವ್ಯಕ್ಕವಾಗಿ ನಿಂತಿರುವುದು. ಅವ್ಯಕ್ತಸ್ಥಿತಿಯಲ್ಲಿದ್ದ ಆ ಸಂಸ್ಕಾರವನ್ನು ಪುನಃ ಗಮನಕ್ಕೆ ತರಲು ಅಥವಾ ವ್ಯಕ್ತವಾಗಿಸಲು ಪದಗಳನ್ನು ಇಟ್ಟುಕೊಂಡಿರುವೆವು. ಆ ಪದಗಳನ್ನು ಕೇಳಿದಾಗ ಕೇಳಿದವರ ಚಿತ್ತಭಿತ್ತಿಯಲ್ಲಿ ತಾವು ಹಿಂದೆ ಅನುಭವಿಸಿದ ವಸ್ತುವಿನ ಚಿತ್ತಸಂಸ್ಕಾರಕ್ಕೆ ಸಜಾತೀಯವಾದ ಸಂಸ್ಕಾರವೂ ತನ್ಮೂಲಕ ಹುಟ್ಟಿದ ಅನುಭವವೂ ಹುಟ್ಟುವುವು. ಇದೇ ವಾಚ್ಯಶಕ್ತಿಯು. ಕುದುರೆ ಎಂಬ ಶಬ್ದವನ್ನು ಒಬ್ಬನು ಉಚ್ಚರಿಸಿದ ಕೂಡಲೆ ಕೇಳಿದವರ ಮನಸ್ಸಿನ ಮುಂದೆ ಕುದುರೆಯ ಆಕೃತಿಯು ತರಲ್ಪಡುವುದು. ಇದೇ ಆ ಶಬ್ದಗ ಶಕ್ತಿಯು. "ಕುದುರೆಯು ಓಡುತ್ತಿದೆ; ಕೆಂಪುಬಣ್ಣದ ಅಂಗಿಯನ್ನು ಕರಿಟೊಪ್ಪಿಗೆಯನ್ನು ಹಾಕಿಕೊಂಡ ಸವಾರನು ಓಡಿಸುತ್ತಾನೆ" ಎಂಬ ವಾಕ್ಯ ಶ್ರವಣಾನಂತರದಲ್ಲಿ ಏನಾಗುವುದು; ವಿಚಾರಿಸಿರಿ. ಮೊದಲು ಒಂದು ಕುದುರೆಯ ಚಿತ್ರವೂ, ಬಳಿಕ ಅದರ ಸವಾರನು, ಅನಂತರ ಅವನ ರೂಪವು, ಆಮೇಲೆ ಅವನ ಟೊಪ್ಪಿಗೆಯೂ, ಅವನ ಅಂಗಿಯೂ ಅವನು ಕುಳಿತಿರುವ ಸಿತಿಯೂ, ಆ ಮೇಲೆ

ಕುದುರೆಯ ಓಡುವಿಕೆಯೂ, ಇವುಗಳ ಪ್ರತಿಕೃತಿಯು ಮನಸ್ಸಿನಲ್ಲಿ ಒಂದೊಂದಾಗಿ ಪ್ರತ್ಯಕ್ಷ ಸಮಾನಾಕಾರವಾಗಿ ಉಂಟಾಗುತ್ತಿದೆ. ಕೇಳಿದವರು ತಾವೇ ಸಾಕ್ಷಾತ್ತಾಗಿ ನೋಡಿದ್ದರೆ ಹೇಗೋ ಹಾಗೆಯೇ ಅವುಗಳ ಸಂಸ್ಕಾರವನ್ನು ಹೊಂದುವರು. ನಮ್ಮ ಅಭಿಪ್ರಾಯಗಳನ್ನೆಲ್ಲ ಸ್ವಲ್ಪವೂ ತಪ್ಪದೆ ಇತರರ ಮನಸ್ಸಿಗೆ ಗೋಚರವಾಗು ವಂತೆ ಮಾಡುವ ರೀತಿಯೇ ಇದು. ಹೀಗೆ ಪದಗಳ ಸಮುದಾಯದಿಂದ ನಮ್ಮ ಅಭಿಪ್ರಾಯವನ್ನು ಬೋಧಿಸುವ ಪದಶಕ್ತಿಯು ವಾಚ್ಯಶಕ್ತಿ ಎನ್ನುವುದು. ಈ ಪದ ಶಕ್ತಿಯೇ ಕವಿಗಳ ವಜ್ರಾಯುಧವು. ಬಾಹ್ಯೇಂದ್ರಿಗಳಿಂದುಂಟಾಗುವ ಸಕಲ ವಿಧ ವಾದ ಅನುಭವಗಳನ್ನೂ ಕೆಲವು ಪದ ಸಂಯೋಗದಿಂದ ಪಾಠಕರ ಚಿತ್ತಭಿತ್ತಿಯಲ್ಲಿ ಬಾಹ್ಯೇಂದ್ರಿಯಗಳ ಸಹಾಯವಿಲ್ಲದೆಯೂ, ಚಿತ್ರಪಠಾದಿಗಳ ಸಹಾಯವಿಲ್ಲದೆಯೂ ಅಲ್ಪಸ್ವಲ್ಪ ಶ್ರಮವನ್ನು ಕೊಡದೆಯೂ, ತಮ್ಮ ಪರಿಚಯವನ್ನೂ ತಮ್ಮ ಅಭಿಪ್ರಾಯ ವನ್ನೂ, ತಾವು ಅನುಭವಿಸಿದ ಸುಖಗಳನ್ನೂ, ಹೊಂದುವಂತೆ ಮಾಡಿದವರು ಮಹಾಕುಶಲರಲ್ಲವೇ? ಒಂದೊಂದು ವಿಷಯಕ್ಕೆ ಗೋಚರವಾಗುವ ಪದಾರ್ಥದ ಗುಣಗಳನ್ನು ಬುದ್ಧಿಬಲದಿಂದ ಒಟ್ಟುಗೂಡಿಸಿ ಒಮ್ಮೆಯೇ ಅವುಗಳ ಪರಿಚಯಾನು ಭವವನ್ನು ತಮ್ಮಂತೆಯೇ ತಮ್ಮನ್ನಾಶ್ರಯಿಸಿದವರು ಉಳಿದ ಕಡೆಯಲ್ಲಿಯೇ ಹೊಂದುಂವತೆ ಮಾಡುವುದು ಬಾಯಿಮಾತೇ? ಹೀಗೆ ಯಾರು ಮಾಡಬಲ್ಲರು? ಕವಿ ಯೊಬ್ಬನೇ ಮಾಡಬಲ್ಲನು. ಇದೂ ಅಲ್ಲದೆ ಒಂದು ಇಂದ್ರಿಯದ ಸುಖವನ್ನು ಮತ್ತೊಂದು ಇಂದ್ರಿಯವು ತಿಳಿಸಿದಷ್ಟೇ ಕವಿಯು ಶಬ್ದಶಕ್ತಿಯಿಂದ ಎಲ್ಲಾ ಇಂದ್ರಿ ಯದ ಸುಖವನ್ನು ಮಾನಸೇಂದ್ರಿಯವೆಂಬ ಒಂದು ಇಂದ್ರಿಯದಿಂದಲೇ ತಿಳಿಸಬ ಲ್ಲನು. ಲೋಕಪ್ರತ್ಯಕ್ಷದ ಸಂಸ್ಕಾರಗಳೆಲ್ಲವೂ ಮನೋಭಿತ್ತಿ ಎಂಬ ಒಂದೇ ಆಶ್ರಯದಲ್ಲಿ ನಿಲ್ಲುವುವಾದ್ದರಿಂದ ಒಂದು ಇಂದ್ರಿಯ ವ್ಯಾಪಾರವನ್ನು ಮತ್ತೊಂದು ಇಂದ್ರಿಯ ವ್ಯಾಪಾರದಿಂದ ಸೂಚಿಸಿ ವಿನಿಮಯ ಮಾಡಬಹುದಾಯಿತು. ನೇಮಿ ಚಂದ್ರನು "ಕಿವಿಯಿಂ ದೀಂಟಿಸುವರ್ ಸಮಸ್ತರಸಮಂ" ಎಂದು ಕವಿಗಳನ್ನೂ ಕೇಶಿರಾಜನು "ಅವಾವಿಂದ್ರಿಯದ ಸುಖಮಂ ಶ್ರೋತ್ರದೊಳುದ್ಭಾವಿಪವಾಗ್ದೇ ವಿಗೆ" ಎಂದು ಕವಿಗಳ ದೇವತೆಯಾದ ಸರಸ್ವತಿಯನ್ನೂ ಸ್ತೋತ್ರಮಾಡಿರುವುದರಲ್ಲಿ ಎಷ್ಟು ಅಭಿಪ್ರಾಯವಡಗಿರುವುದು. ಈ ಕವಿಗಳ ವಾಕ್ಯಗಳನ್ನು ಕೇಳಿ;—

( ವನಮಹಿಷೀ ವರ್ಣನೆ ):—

ಪಸುರ್ವುಲ್ಲಂ ಮೇದು ಸಂದೊಂದೆಡೆಯೊಳಮೊಡಲಿಂ ಬಿಲ್ಲೆನಲ್
ಕೊರ್ವಿ ಕೆಚ್ಚಲ್ ।
ಕುಸಿವನ್ನಂ ಬೀಗಿಪಾಲಂ ಬಿರಿವಿಡೆ ಮೊಲೆಯಿಂ ವತ್ಸಪೀತಾವಶೇಷಂ ॥
ಪೊಸಗಾರೊಳ್ತ್ರರಲೊಳ್ ಕಣ್ಣರೆಮುಗುಳ್ದಿರೆಸೃಕ್ವಂಗಳಿಂ ಸೂಸೆಫೇನ ।
ಪ್ರಸರಂ ಮೇಲ್ಕೊತ್ತುತುಂ ನಿಂದುದು ವನಮಹಿಷೀವೃಂದಮಾನಂದದಿಂದಂ॥

( ಕಪಿಯ ವರ್ಣನೆ ):—

ಪರಿದಲೆಯಿಟ್ಟುಪಲ್ಗಿರಿದು ಹರ್ರೆನುತುರ್ಬುತೆ ಪುರ್ಬನೇರಿಸು ।
ತ್ತುರುಗಿಸಿ ನೋಡಿದಾಂಟಲನುಗೈಯ್ಯುತೆ ತೂಗುತೆ ಝುಂಕಿಸುತ್ತೆ ಬಾ ॥
ಯ್ದೆರೆದೊಲೆಯುತ್ತೆ ಕೆಯ್ನೆಗಪಿಜಾಗಿಸಿ ಕುರ್ಗುತು ಮೇಡಿಸುತ್ತೆ ತಾಂ ।
ನೆರೆನಗಿಸಿತ್ತು ತಾಪಸಕುಮಾರರನಲ್ಲಿಯದೊಂದು ಮರ್ಕಟಂ ॥

( ದುಂಬಿಯ ವರ್ಣನೆ ):—

ಪೊಸತಲರ್ದವಕುಳರಸದೊಳ್ ।
ಮುಸುಂಬುಮುಳುಗುವಿನಮೆರಗಿಕೋಡೆರಕೆಗಳಂ ॥
ಪಸರಿಸಿಕಂಪನಲಂಪಿಂ ।
ದುಸಿರ್ದುಸಿರ್ದೀಂಟಿದುದು ಮಧುಪನೆರ್ದೆಮುಳುಗುವಿನಂ ॥

ಈ ವರ್ಣನೆಗಳಲ್ಲಿ ಕವಿಯು ಲೋಕಪ್ರತಿಕೃತಿಯನ್ನು ಶಬ್ದಮುಕುರದಲ್ಲಿ ಎಷ್ಟು ಮನೋಹರವಾಗಿ ಎತ್ತಿ ತೋರಿಸಿರುವನು !

ಯಾವ ಚಿತ್ರಿಕನು ಇಂತು ಬರೆದು ತೋರಿಸಬಲ್ಲನು ? ಕೇಳಿರಿ, ಒಬ್ಬ ಕವಿಯೇ ಅತ್ಯಂತ ಅತ್ಯತಿಶಯವಾಗಿ ಬರೆದ ಒಂದು ಚಿತ್ರಪಟವನ್ನು ನೋಡಿ:-

" ತೆರೆಕರೆಗಣ್ಮಿದಪ್ಪುವಿವೆತಣ್ಣೆಲರಿಂತಡಿಯೊಳ್ರಥಾಂಗಮೀ
ನೆರೆಪುವೆರಾಜಹಂಸ ಚರಣಾಹತಿಯಿಂ ಜಳಬುದ್ಬುದಂಗಳುಂ ॥
ನೊರೆಗಳುಮೀ ತೆರಳ್ದಪುವೆ ಹೇಮಸರೋರುಹಕುಟ್ಮಳಂಗಳೊಳ್ ।
ಬಿರಿಪುವೆ ಪೋಲೆ ಪೂಗೊಳನನಿಂತಜನುಂಬರೆಯಲ್ಕೆ ಬಲ್ಲನೇ ॥ "

" ಅಲರ್ವಂತಿರ್ದುವು ಕುಟ್ಮಲಂಗಳವರೊಳ್ಬಂಡುಂಡು ಪೆಣ್ದುಂಬಿಗಳ್
ನಲಿವಂತಿರ್ದುವು ಕೋರಕಂ ಪೊರೆಸಡಿಲ್ವಂತಿರ್ದುವಾರ್ಳ್ವಂತೆಕೋ ॥
ಗಿಲೆವಿಂಡಿರ್ದುವು ದಿಟ್ಟನಟ್ಟುದೆನೆವ್ಯರ್ಣವ್ಯಕ್ತಿಯಿಂವೃಕ್ಷಗು ।
ಲ್ಮಲತಾಜಾತಿಗಳಿರ್ದುವಿಂತು ಬರೆಯಲ್ ಪೇಳಾರ್ಗವೇಂತೀರ್ಗುವೇ ॥ "

ಎಂದು ಪೇಳುವನು. ಚಿತ್ರಪಟವನ್ನು ನೋಡಿದ್ದರೂ ಇಷ್ಟು ಸ್ಫುಟವಾಗಿ ಆ ಚಿತ್ರಪಠದಲ್ಲಿ ಚಿತ್ರಿಕನು ತೋರಿಸಿದ ಸಾಮರ್ಥ್ಯವು ಗೋಚರವಾಗುತ್ತಿದ್ದಿತೆ ? ಹೇಳಿ. ಕವಿಯ ಮಹಿಮೆಯು ಇಷ್ಟೇ ಅಲ್ಲ. ಬ್ರಹ್ಮನ ಸೃಷ್ಟಿಗಿಂತ ಕವಿಯ ಸೃಷ್ಟಿಯು ಹೆಚ್ಚು ಸಾಮರ್ಥ್ಯ ಪ್ರದರ್ಶಕವಾದದ್ದು. ಬ್ರಹ್ಮನು ಬಾಯಿಂದಲೇ ರಸವನ್ನು ಕುಡಿವುದೆಂದೂ, ಕಣ್ಣಿನಿಂದಲೇ ರೂಪವನ್ನು ನೋಡುವುದೆಂದೂ, ಕಿವಿಯಿಂದಲೇ ಶಬ್ದವನ್ನು ಕೇಳುವುದೆಂದೂ, ನಾಲಿಗೆಯಿಂದಲೇ ರಸವನ್ನು ತಿಳಿಯುವುದೆಂದೂ, ಕಟ್ಟಳೆ ಮಾಡಿರುವನು. ಕವಿಯಾದರೋ ಕಿವಿಯೊಂದರಿಂದಲೇ ಕುಡಿಯಿಸುವನು. ನೋಡಿಸುವನು. ವಾಸನೆಯನ್ನುಂಟು ಮಾಡಿಸುವನು, ಸ್ಪರ್ಶ ಸುಖವನ್ನು ಹುಟ್ಟಿಸುವನು. ಕವಿಯು ತನ್ನ ವಾಙ್ಮೂಲಕ ಹೊರಟ ಶಬ್ದಜಾಲವನ್ನು ಇತರರ ಕಿವಿಗಳ ಮೇಲೆ ಎಸೆದು ಮೇಲೆ ಹೇಳಿದ ವ್ಯಾಪಾರಗಳನ್ನು ಮಾಡಿಸುವನು. ಕವಿಯು ಒಂದು ವರ್ಣನೆಯನ್ನು ಮಾಡಿದರೆ ಆ ವರ್ಣನೆಯಿಂದ ನಮಗೆ ಆ ವರ್ಣಿತವಾದ ವಸ್ತುಗಳ ಪ್ರತ್ಯಕ್ಷ ಸಮಾನಾಕಾರವಾದ ಸ್ವರೂಪ ಸ್ಥಿತಿ ಮುಂತಾದವುಗಳು ಗೋಚರವಾಗುವುದಿಲ್ಲವೇ? ಕಾವ್ಯಪರಿಚಯವುಳ್ಳ ತಮಗೆ ಅನುಭೂತ ವಿಷಯವಾಗಿರುವುದರಿಂದ ಇದನ್ನು ದೃಷ್ಟಾಂತಿಸಬೇಕಾಗಿಲ್ಲ. ಒಂದು ಇಂದ್ರಿಯದಿಂದ ಹುಟ್ಟುವ ಸುಖವನ್ನು ಮತ್ತೊಂದು ಇಂದ್ರಿಯವು ತಿಳಿಸದು; ಎಂದು ಹೇಳಿದೆವಷ್ಟೇ? ಕವಿಯು ಶಬ್ದಶಕ್ತಿಯಿಂದ ಎಲ್ಲಾ ಇಂದ್ರಿಯಗಳ ಸುಖವನ್ನು ಮಾನಸೇಂದ್ರಿಯ ದ್ವಾರಾ ತಿಳಿಸಬಲ್ಲನು. ನೇಮಿಚಂದ್ರನು " ಕಿವಿಯಿಂ ದೀಂಟಿಸುವರ್ ಸಮಸ್ತ ರಸಮಂ " ಎಂದು ಹೇಳಿದಂತೆ ಕವಿಯು ಸಮಸ್ತವಿಧವಾದ ಪರಿಚಯಗಳನ್ನು ಶಬ್ದಜಾಲದಿಂದ ಕಿವಿಯ ಮಾರ್ಗವಾಗಿ ಮನೋಭಿತ್ತಿಯಲ್ಲಿ ಚಿತ್ರಿಸಿ ಪ್ರತ್ಯಕ್ಷವಾಗಿ ಅನುಭವಿಸಿದ್ದರೆ ಎಷ್ಟೋ, ಅದಕ್ಕಿಂತ ಹೆಚ್ಚಾದ ಅನುಭವವನ್ನು ಕೊಡುವನು.

ಇದೂ ಅಲ್ಲದೆ, ಬ್ರಹ್ಮಸೃಷ್ಟಿಗೂ ಕವಿಸೃಷ್ಟಿಗೂ ಬಹಳ ತಾರತಮ್ಯವುಂಟು. ಪ್ರಪಂಚದಲ್ಲಿ ಭಯಜನಕವಾದ ವಸ್ತುಗಳು ಭಯವನ್ನು ಹುಟ್ಟಿಸುವುವು. ಜಿಗುಪ್ಸಿತ

ವಾದ ವಸ್ತುಗಳು ಜಿಗುಪ್ಸಿತವಾಗಿಯೂ, ದುಸ್ಸಹವಾದುವುಗಳು ದುಸ್ಸಹಗಳಾಗಿಯೂ, ದುಃಖಜನಕಗಳಾದುವು ದುಃಖಜನಕಗಳಾಗಿಯೂ ಇರುವುವು. ಇವೆಂದೆಂದೂ, ಆನಂದಜನಕಗಳಾಗವು. ಜಿಂಕೆಯ ಮೇಲೆ ಬಿದ್ದು ಅದರ ರಕ್ತವನ್ನು ಹೀರುತ್ತಿರುವ ಹುಲಿಯನ್ನು ಸಾಕ್ಷಾತ್ತಾಗಿ ಎದುರಿಗೆ ನಿಂತುನೋಡಲು ಕಾಡಿಗೆ ಹೋಗುವವರು ಯಾರು? ಕೊಳೆತು ನಾರಿ ಹುಳುಗಳು ವಿಳಿವಿಳಿಯೆಂದು ನೊದಕುತ್ತಿರುವ ಕತ್ತೆಯ ಶವವನ್ನು ನೋಡಲು ಯಾರು ಇಷ್ಟಪಡುವರು? ಸಹಾರಾಮರಳುಗಾಡಿನ ಬಿಸಿಲಿನ ತಾಪವನ್ನು ಸಹಿಸಲು ಯಾರು ಒಪ್ಪುವರು? ಆಲ್ಪ್ಸ್ ಬೆಟ್ಟದ ಶಿಖರದಲ್ಲಿಯೂ, ಉತ್ತರ ಸಾಗರದಲ್ಲಿಯೂ ಹಿಮದ ಗಡ್ಡೆಗಳ ನಡುವೆ ಸಿಕ್ಕಿ ಸೇಡುಗೊಂಡು ಪ್ರಾಣಬಿಡುವಷ್ಟು ಸಹನೆ ಯಾರಿಗುಂಟು? ಆ ಪ್ರಾಣಬಿಡುತ್ತಿರುವ ಬಡವರ ಸಂಕಟಗಳನ್ನು ನಿಂತು ನೋಡುವಷ್ಟು ಯಾರಮನಸ್ಸು ಕಠಿಣವಿರುವುದು? ಹೀಗಿದ್ದರೂ ಮೇಲೆ ಹೇಳಿದ ವಿಷಯಗಳ ವರ್ಣನೆಗಳು ಯಾವ ಕವಿಗೆ ತಾನೆ ಮಹತ್ವವನ್ನು ತಾರವು? ಆ ವರ್ಣನೆಗಳನ್ನು ಓದಿ, ಓದಿ ಆ ಪ್ರತಿಕೃತಿಗಳ ಪ್ರತಿಭಾನಗಳನ್ನು ಮನಸ್ಸಿಗೆ ತಂದುಕೊಂಡು ಮನನಮಾಡಿ ಆನಂದಪಡುವ, ಎಂದು ಯಾವ ಸಹೃದಯನು ಉತ್ಸಾಹಿಸುವುದಿಲ್ಲ? ಕವಿಕಾರ್ಯದ ಸಾಮರ್ಥ್ಯವನ್ನು ಸ್ವಲ್ಪ ಯೋಚಿಸಿ ನೋಡಿದರೆ, ಕಾರಣವು ಗೊತ್ತಾಗದೆ ಇಲ್ಲ. ಕಾಡಾನೆಯ ವರ್ಣನೆಯೊಂದನ್ನು ದೃಷ್ಟಾಂತಕ್ಕೆ ತೆಗೆದುಕೊಳ್ಳೋಣ; ಸಲಗನು ಭಯಂಕರವಾದ ಅಡವಿಯ ನಡುವೆ ನದಿಯ ತೀರದಲ್ಲಿ ನಿಂತು ಅಲ್ಲಿದ್ದ ಒಂದು ಅತ್ಯುನ್ನತವಾದ ಮರವನ್ನು ಬುಡಸಹಿತ ಉರುಳಿಸಿ ಅದರ ಸೊಪ್ಪನ್ನು ಸೊಂಡಿಲಿನಿಂದ ಕಿತ್ತುಕಿತ್ತು ತನ್ನ ಯೂಥದಲ್ಲಿದ್ದ ಮರಿಗಳಿಗೆ ನೀಡುತ್ತಲೂ, ಆ ಮರಿಗಳು ಅತ್ತಿತ್ತ ಚದುರದಂತೆ ಕಣ್ಣೆಕಾವಲಾಗಿ ನೋಡುತ್ತಲೂ ಒಂದು ಸಣ್ಣ ಧ್ವನಿಗೂ ಹೆದರಿ ತನ್ನ ಗುಂಪನ್ನು ಬೇಗಬೇಗನೆ ಮತ್ತೊಂದು ಕಡೆಗೆ ಸಾಗಿಸುತ್ತಲೂ ಇರುವುದನ್ನು ನೋಡುತ್ತಿರುವದರಲ್ಲಿ ಆನಂದಾತಿಶಯವು ಹುಟ್ಟುತ್ತಿದ್ದರೂ ಆ ಆನೆಯ ಗುಂಪು ನಮ್ಮ ಕಡೆಗೆ ಬಂದರೇನು ಗತಿ? ಎಂಬ ಭಯವು ಆಗಲೆ ಹುಟ್ಟಿ ಆ ಆನಂದವನ್ನು ಮೆಟ್ಟಿ ತಾನೇ ತಾನಾಗಿ ಕಾಣಿಸಿಕೊಳ್ಳುವುದು; ಎದೆಯು ದಡಬಡ ಎನ್ನುವುದು; ಉಸಿರು ಕೂಡ ಹೊರಡದು. ಆ ಕಾಡಾನೆಯನ್ನು ಚಿತ್ರಿಕನ ಕಾಗದದ ಮೇಲೆ ರಚಿಸಿದ ಚಿತ್ರಪಟದಲ್ಲಿಯೂ, ಕವಿಯಿಂದ ವಾಙ್ಮೂಲಕ ಮನೋಭಿತ್ತಿಯಲ್ಲಿ ರಚಿಸಲ್ಪಟ್ಟ ಚಿತ್ರಪಟದಲ್ಲಿಯೂ ಸಾಕ್ಷಾತ್ಕರಿಸಿದಾಗ ಆ ಅಪಾಯ ಭೀತಿಯು ಎಲ್ಲಿಯೋ ಮಾಯವಾಗಿ ಆ ಆನಂದವು ಪುಷ್ಟವಾಗಿ ತಾನೇ ತಾನಾಗಿ ತಲೆಯೆತ್ತುವುದು, ಚಿತ್ರಿಕನೂ, ಶಿಲ್ಪಿಕ

ನೂ ಕವಿಯೂ ಭಯಸ್ಥಾನದಲ್ಲಿ ಉತ್ಸಾಹವನ್ನು ಇಟ್ಟು ಆ ಪರಿಚಯದ ಆನಂದವನ್ನು ಹೆಚ್ಚಿಸುವರು. ಹೀಗೆಯೇ ಜಿಗುಪ್ಸಿತವಾದ ವಸ್ತುವಿನಲ್ಲಿ ಜಿಗುಪ್ಸೆಗೆ ಕಾರಣವನ್ನೂ ತನ್ಮೂಲಕವಾಗಿ ಹುಟ್ಟುವ ನಿರೋಧಪ್ರವೃತ್ತಿಯನ್ನೂ ನಿರ್ಮೂಲಿಸುವರು. ಲೋಕ ವನ್ನು ಸಾಕ್ಷಾತ್ತಾಗಿ ನೋಡುವುದಕ್ಕಿಂತ ಕಲಾದ್ವಾರಾ ನೋಡುವುದು ಮಹಿಮಾ ಧಾಯಕವು. ಕಲೆಗಳಲ್ಲಿರುವ ಮುಖ್ಯವಾಗಿ ಕಾವ್ಯಕಲೆಯಲ್ಲಿ ಕಂಗೊಳಿಸುವ ಈ ಮಹಿಮೆಯನ್ನು ದಶರೂಪಕಕಾರನು ಸಂಗ್ರಹಿಸಿ ಹೀಗೆ ಹೇಳುತ್ತಾನೆ.

> ರಮ್ಯಂ ಜಿಗುಪ್ಸಿತಮುದಾರಮಥಾಪಿನೀಚ ।
> ಮುಗ್ರಂ ಪ್ರಸಾದಿಗಹನಂ ವಿಕೃತಂ ಚ ವಸ್ತು ॥
> ಯದ್ವಾಪ್ಯವಸ್ತುಕವಿಭಾವಕಭಾವ್ಯಮಾನಂ ।
> ತನ್ನಾಸ್ತಿಯನ್ನರಸಭಾವಮುಪೈತಿಲೋಕೇ ॥

ತಿರುಮಲಾರ್ಯನು,

> ಕಡುಪಿಂ ಕೂರಾನೆ ಕಾಳ್ಕಿಚ್ಚಡವಿ ಬರಸಿಡಿಲ್ ಬಳ್ಳಿಮಿಂಚೆಂಬಿವೆಲ್ಲಂ ।
> ಪಡೆಗುಂ ನೋಳ್ಪರ್ಗೆಮೇಣುಬ್ಬೆಗದೊದವನವೇ ಮತ್ತವೊಳ್ಗಬ್ಬದೊಳ್ಭಂ ॥
> ದೊಡನೊಳ್ಪಂ ಪೆತ್ತುಮಾಳ್ಕುಂ ಸಹೃದಯಹೃದಯಾಹ್ಲಾದಮಂ ನಾಡೆಯಂತಾ।
> ದೊಡಮುಳ್ಕೇಂ ಕಬ್ಬಿಗರ್ತಾಮಘಟಿತಘಟನಾ ನೂತನ ಬ್ರಹ್ಮರಲ್ತೇ ॥

ಎಂದೂ; ಭಾಸ್ಕರನು ಜೀವಂಧರ ಚರಿತ್ರೆಯಲ್ಲಿ;

> “ ಬಿಸಜ ಸಂಭವಷಡ್ರಸವನಿ ।
> ರ್ಮಿಸೆಕವೀಶ್ವರ ಧಾತ್ರಿಯೊಳುನವ ।
> ರಸವಸೃಜಿಸಿದೂಡಾಚತುರ್ಮುಖನಿಂದ ಕವಿವರರು ॥
> ವಸುಧೆಯೊಳು ಸರಿಮಿಗಿಲೆನಿಸಿಪಸ ।
> ರಿಸಲುಲೋಕತ್ರಯವು ಸತ್ಕವಿ ।
> ಯೆಸಗಿದಂದದೊಳೊಪ್ಪಿಹುದು ತಿಳಿವರೆ ಧರಿತ್ರಿಯಲಿ ॥

ಎಂದೂ ಹೇಳುತ್ತಾರೆ. ಇವರು ಹೇಳುವ ಹಾಗೆ ಲೋಕದ ಎಂಥ ವಿಷಯಗಳೂ ಹೃದಯಂಗಮವಾಗದೆ ಇರವು.

---

* ಷಡ್ರಸ,–ಜಿಹ್ವೇಂದ್ರಿಯ ಪ್ರತ್ಯಕ್ಷವಾದುದು. ನವರಸ,–ಮಾನಸೇಂದ್ರಿಯ ಪ್ರತ್ಯಕ್ಷವಾದುದು. ಜಿಹ್ವೇಂದ್ರಿಯ ಸುಖಕ್ಕಿಂತ ಪ್ರಬಲಸುಖವನ್ನು ಕೊಡುವುದು.

ಕಲಾಕುಶಲರ ನೈಪುಣ್ಯವು ಲೋಕಸ್ಥಿತಿಗೆ ಸದೃಶವಾದ ಸ್ಥಿತಿಯನ್ನು ತೋರಿಸುವುದರಲ್ಲಿ ನಿಂತುಹೋಗುವುದು. ಕವಿಗಳಲ್ಲಿ ಇದ್ದ ಸ್ಥಿತಿಯನ್ನು ಇದ್ದಹಾಗೆ ತೋರಿಸುವುದು ಒಂದು ಮಹಿಮೆಯಾದರೂ ಅವರು ಅದನ್ನು ತೋರಿಸುವ ವೇಳೆಯಲ್ಲಿ ಅದಕ್ಕೆ ಒಂದು ವಿಧವಾದ ಶೋಭೆಯನ್ನು ಕೊಟ್ಟೇ ತೋರಿಸುವರು. ಮತ್ತು ತಾವು ತೋರಿಸುವ ಲೋಕಸ್ಥಿತಿಯಲ್ಲಿ ಪದೇಪದೇ ಪರಿಚಯ ಮಾಡೆಂಬ ಆಶೆಯನ್ನು ಜನರಲ್ಲಿ ಹುಟ್ಟಿಸುವರು. ಗೇರೆಸೊಪ್ಪೆ ಜಲಪಾತವು ಬಹು ರಮಣೀಯ ನೋಟವಷ್ಟೇ? ಅದನ್ನು ಆರುಸಲ ನೋಡುವವರೆಗೂ ನೋಡಬೇಕೆಂಬ ಕುತೂಹಲ ನಿಲ್ಲುವುದು ಕಷ್ಟ. ಏಳನೇಸಲ ನೋಡಬೇಕೆಂಬ ಆಶೆಯು ಹುಟ್ಟುವುದೇ ಇಲ್ಲ. ಅದೇ ಜಲಪಾತವನ್ನು ಕಾಳಿದಾಸನಂಥ ಕವಿಯು ವರ್ಣಿಸಿದ್ದಲ್ಲಿ ಆ ವರ್ಣನೆಯಲ್ಲಿ ಬೇಸರಿಕೆ ಹುಟ್ಟುತ್ತಿತ್ತೇ? ವಾಲ್ಮೀಕಿರಾಮಾಯಣದ ಚಿತ್ರಕೂಟದ ವರ್ಣನೆಯನ್ನೂ ಬೆಳದಿಂಗಳವರ್ಣನೆಯನ್ನೂ ಶತಾವೃತ್ತಿಯೋದಿದವರೂ ಉಂಟೆಂದು ಕೇಳಿರುತ್ತೇನೆ. "ಆಲ್ಪ್ಸ್" ಬೆಟ್ಟಗಳ ಏರುವಿಕೆಯ ವರ್ಣನೆಯನ್ನು ವೃದ್ಧರೂ ಕೂಡ ಆನಂದದೊಡನೆ ಓದುತ್ತಿರುವರಂತೆ. ಕವಿವಾಙ್ಮುಕುರದಲ್ಲಿ ಪ್ರತಿಫಲಿತವಾದ ವಸ್ತುವಿನಲ್ಲಿ ಬೇಸರಿಕೆ ಎಂಬುದೇ ಇರುವುದಿಲ್ಲ.

**ಅನಿಮಿತ್ತಂ ಪನೆಗಳ್ ಪಳಚ್ಚನೆಸೆವನ್ನಂ ಮಂದಹಾಸಪ್ರಕಾ।**
**ಶನಮಂ ಮುದ್ದುಮೊಗಕ್ಕೆ ತಂದು ಪರಿತಂದಪ್ಪಪ್ಪೆನುತ್ತಪ್ಪಿಪಿಂ ॥**
**ದನೆಪೊಕ್ಕೊಯ್ಯನಡಂಗಿದಾಯೆನುತೆ ಮತ್ತೈತಂದುಮುಂಡಾಡಿಭೂ।**
**ಪನುಮಂ ದೇವಿಯುಮಂ ಪ್ರಮೋದರಸದೋಳ್ತೇಂಕಾಡಿಪಂ ನಂದನಂ ॥ ೧ ॥**

ಮಕ್ಕಳ ಈ ಆಟದ ಸುಖವನ್ನು ಅನುಭವಿಸಿದವರನೇಕರಿಲ್ಲಿರುವರು. ಈ ಪದ್ಯವನ್ನು ಕೇಳಿದಾಗ ಹುಟ್ಟಿದಷ್ಟು ಆನಂದವು ಆಗ ಹುಟ್ಟಿತೇ ಹೇಳಲಿ. ಇನ್ನೊಮ್ಮೆ ಓದುವೆನು; ಬೇಸರಿಕೆ ಹುಟ್ಟುವುದೇ ಹೇಳಲಿ. ಏನು ವರ್ಣಿಸಿರುವನು! ಎಂದು ವಿಸ್ಮಯಪಡುವಿರಿ. ಈ ಆಟವನ್ನು ಮಗುವು ಒಂದು ಸಲಮಾಡಿದರೆ ರಮಣೀಯವಾಗಿರುವುದು. ಮತ್ತೊಮ್ಮೆ ಮಾಡಿದರೂ ಸಹಿಸಿಕೊಳ್ಳಬಹುದು. ಇನ್ನೊಮ್ಮೆ ಮಾಡಿದರೆ ಎಂಥ ಸಹನಸ್ವಭಾವವುಳ್ಳ ತಂದೆಗೂ ಕೋಪ ಬಂದು ಮಗುವನ್ನು ಹೊಡೆದಟ್ಟುವನು. ಸಹೃದಯನಲ್ಲಿ ಎಂದಾದರೂ ಈ ಪದ್ಯವನ್ನು ಪದೇಪದೇ ಓದುವುದರಿಂದ ಸಿಟ್ಟೊ ಬೇಸರಿಕೆಯೂ ಹುಟ್ಟುತ್ತಿದೆಯೇ?

ಕವಿಗಳು ವರ್ಣಿಸುವ ಪ್ರಕಾರವೇ ಚಮತ್ಕಾರವಾಗಿರುವುದು. ಈ ಪದ್ಯಗಳನ್ನು ಕೇಳಿರಿ:—

ಮಾವಿನ ಮರದ ವರ್ಣನೆ:—

ಅಸದಳಮಾಯ್ತು ರೂಪಮುದಮುಗ್ಗಳಮಾದುದು ಯೌವನೋದಯಂ ।
ಪೊಸಸಿರಿವಂತ ನಾಸಿರಿಯುಮಂ ಜನಕಂ ಮಧುಕೊಟ್ಟನಿಂ ವಿಚಾ ॥
ರಿಸುಗುಮೆ ಚೂತನೊಲ್ದು ಪೊರೆಗುಂ ಗಿಳಿಯುಂ ಮುಖರಾಗಿಯುಂ ಮಧು ।
ವ್ಯಸನಿಮದಾಳಿಯುಂ ಸಹಜವಕ್ರವಚಸ್ವಿಯ ನನ್ಯಪುಷ್ಟನಂ ॥

ಅರುಣೋದಯ ವರ್ಣನೆ:—

ಹರಿದ್ವಶಂ ಬಂದಪಂ ವಾಹಳಿಗೆ ನುತರುಣಂ ವ್ಯೋಮವಿಸ್ತೀರ್ಣರಂಗಾಂ ।
ತರವೀಥೀಚ್ಛನ್ನ ತಾರಾಸ್ಫಟಿಕಶಕಲಮಂ ನೂಂಕುತುಂ ಚಾರುಚಾಮೀ ॥
ಕರಯಂತ್ರವ್ರಾತದಿಂ ಕುಂಕುಮಘನರಸಮಂ ಸಿಂಪಿಸುತ್ತಿರ್ದನೆಂಬಂ ।
ತಿರಲಿತ್ತಂ ನೀಳ್ದು ಪೊಣ್ಮಿತ್ತುದಯ ಸಮಯದೊಳ್ ಶೋಣಸೂ
ರ್ಯಾಂಶುಜಾಲಂ ॥

ಈ ರೀತಿಯಲ್ಲಿ ಅನೇಕ ಉದಾಹರಣೆಗಳನ್ನು ಕೊಡಬಹುದು. ಒಟ್ಟೇನು? ಅವರ ವರ್ಣನಾವೈಖರಿಯು ಹಲವಿಧವಾಗಿರುವುದು.

ಕವಿಯಿಂದ ವರ್ಣಿಸಲ್ಪಟ್ಟು ರಸಭಾವವನ್ನು ಹೊಂದದೆ ಇರುವ ವಸ್ತುವೇ ಪ್ರಪಂಚದಲ್ಲಿಲ್ಲ. ಈ ವಿಷಯವನ್ನು ವಿಸ್ತಾರವಾಗಿ ನಾನು ಬರೆದಿರುವ "ಕವಿಸಮಯ" ವೆಂಬ ಗ್ರಂಥದ ಪ್ರಥಮಭಾಗದಲ್ಲಿ ಉಪಪಾದಿಸಿರುವೆನು. ಕವಿಕಾರ್ಯಫಲವಾದ ವರ್ಣನೆಗಳನ್ನು ಓದಿದಷ್ಟು ಆನಂದವು ಹೆಚ್ಚುವುದಲ್ಲದೆ ಪೂರ್ವದಲ್ಲಿ ಪಟ್ಟ ಆನಂದವು ಜ್ಞಾಪಕಕ್ಕೆ ಬರುತ್ತಿರುವುದು. ಆ ಆನಂದವು ಸ್ಮರಣವೇಳೆಯದಾದ್ದರಿಂದ ಮಿತಿಮೀರಿದಂತೆ ತೋರುವುದು. ಇಂಥ ಸಂಗತಿಯು ಚಿತ್ರಕರ್ಮಾದಿ ಇತರ ಕಲೆಗಳಲ್ಲಿ ಹುಟ್ಟಿದರೂ ಇಷ್ಟುಮಟ್ಟಿಗೆ ಹುಟ್ಟದು.

ಕವಿಕಾರ್ಯಕ್ಕೆ ಸಹಜವಾದ ಈ ಅತಿಶಯವನ್ನು ಕವಿಕಾರ್ಯಮಹಿಮೆಯನ್ನು ಬಲ್ಲ ಕವಿಶ್ರೇಷ್ಠನಾದ ಕಾಳಿದಾಸನು ಶಕುಂತಳೆಯ ಸೌಂದರ್ಯವರ್ಣನಾವಸರದಲ್ಲಿ ಸೂಚಿಸಿರುವನು.

ಚಿತ್ರೇನಿವೇಶ್ಯ ಪರಿಕಲ್ಪಿತ ಸತ್ವಯೋಗಾ।
ರೂಪೋಚ್ಚಯೇನ ವಿಧಿನಾಮನಸಾಕೃತಾನು?
ಸ್ತ್ರೀರತ್ನ-ಸೃಷ್ಟಿರಪರಾ ಪ್ರತಿಭಾತಿ ಸಾ ಮೇ।
ಧಾತುರ್ವಿಭುತ್ವಮನುಚಿಂತ್ಯವಪುಶ್ಚತಸ್ಯಾಃ" ॥

ಇಲ್ಲಿ ಕವಿಯು ಶಕುಂತಲೆಯನ್ನು ಮೊದಲು ಬ್ರಹ್ಮನು "ಚಿತ್ರೇನಿವೇಶ್ಯ ಪರಿಕಲ್ಪಿತ ಸತ್ವಯೋಗಾ" ಎಂದರೆ–ಚಿತ್ರದಲ್ಲಿ ಚಿತ್ರಿಕನಂತೆ ಬರೆದು ಅದಕ್ಕೆ ಜೀವ ಕಳೆಯನ್ನು ಕೂಡಿಸಿ ಸೃಷ್ಟಿಸಿರಬಹುದೆಂದು ವರ್ಣಿಸುವನು. ಚಿತ್ರಿಕನು ಮೊದಲು ಮನಸ್ಸಿನಲ್ಲಿ ಒಂದು ಸುಂದರವಾದ ರೂಪವನ್ನು ನೆನಿಸಿಕೊಳ್ಳುವನು. ಆ ರೂಪವನ್ನು ಹಲಗೆಯ ಮೇಲೆ ಲೇಖಿನಿಯಿಂದ ಗುರುತು ಹಚ್ಚುವನು. ಆ ಮೇಲೆ ಅದನ್ನು ಚನ್ನಾಗಿ ನೋಡುವನು. ಅದರಲ್ಲಿ ಕಂಡ ಕೊರತೆಗಳನ್ನು ಅಳಿಸಿ ಅಳಿಸಿ ಪುನಃ ಪುನಃ ಬರೆದು ನೇರ ಮಾಡುವನು. ತೃಪ್ತಿ ಹುಟ್ಟುವವರೆಗೂ ಪರಿಷ್ಕರಿಸುತ್ತ ಹೋಗುವನು. ಎಷ್ಟು ಪರಿಷ್ಕರಿಸುತ್ತ ಹೋದರೂ ತೃಪ್ತಿ ಹುಟ್ಟದು. ಇನ್ನೂ ಇದಕ್ಕಿಂತ ಮನೋಹರವಾಗಿ ಮಾಡಲು ತನ್ನ ಕೈಯುಲ್ಲಾಗದು, ಎಂದು ಯಾವಾಗ ಗೊತ್ತಾಗುವುದೋ ಅಗ ತನ್ನ ಪರಿಷ್ಕಾರವನ್ನು ಸಾಕು ಮಾಡುವನು. ಆ ರೀತಿಯಲ್ಲಿಯೇ ಬ್ರಹ್ಮನು ತನಗೆ ತೃಪ್ತಿ ಹುಟ್ಟುವವರೆಗೂ ತಾನು ಹಲಗೆಯ ಮೇಲೆ ರಚಿಸಿದ ಶಕುಂತಲೆಯನ್ನು ಸರಿಮಾಡುತ್ತ ಹೋಗಿ ತನ್ನ ಮನಸ್ಸಿನಲ್ಲಿ ಹೇಗೆ ಯೋಚಿಸಿದನೋ ಅಷ್ಟು ಸುಂದರವಾಗಿ ತನ್ನ ಕೈಯಲ್ಲಿ ತೋರಿಸಲಾಗದೆಂದು ನಿರಾಶನಾದ ಮೇಲೆ ಆ ಪರಿಷ್ಕರಣವನ್ನು ನಿಲ್ಲಿಸಿ ಅದಕ್ಕೆ ಜೀವಕಳೆಯನ್ನು ತುಂಬಿ ನಿರ್ಮಿಸಿರಬೇಕು. ಎಂದು ಯೋಚಿಸುವನು. ಆಮೇಲೆ ಹಾಗೆಯೇ ಪರ್ಯಾಲೋಚಿಸಿ ತಾನು ಹಾಗೆ ವರ್ಣಿಸಿದ್ದು ಅನುಚಿತವು, "ವಿಧಿನಾ ಮನಸಾ ಕೃತಾನು?" ಎಂದು ವರ್ಣಿಸಬೇಕಾಗಿತ್ತು ಎಂದು ಯೋಚಿಸುವನು. ಮನಸ್ಸಿನಲ್ಲಿ ಯೋಚಿಸಿದಷ್ಟು ಮನೋಹರತ್ವವನ್ನೂ ಮಹತ್ವವನ್ನೂ ನಿರೂಪಿಸಿ ತೋರಿಸಲು ಸಾಧ್ಯವಲ್ಲವಷ್ಟೆ? ನಾವು ಒಂದು ಪ್ರಬಂಧವನ್ನು ಬರೆಯುಲು ಹೊರಟು ಯೋಚಿಸುವಾಗ ಮೊದಲು "ಹಾಗಿರಬೇಕು, ಹೀಗಿರಬೇಕು ಹೀಗೆ ಇದ್ದರೇನೇ ಸೊಗಸಾಗುವುದು" ಎಂದು ಯೋಚಿಸಿ ಉಪಕ್ರಮಿಸುವೆವು. ನಾವು ಬರೆದ ಪ್ರಬಂಧವನ್ನು ಯೋಚಿಸಿದ ಪ್ರಬಂಧದೊಡನೆ ಹೋಲಿಸಿ ನೋಡುವಲ್ಲಿ ಯೋಚಿಸಿದಷ್ಟು ರಚಿಸಿದ ಪ್ರಬಂಧವು ಸೊಗಸಾದೀತೆ? ಚಿತ್ರಿಕ ಮೊದಲಾದ ಕಲಾಕುಶಲರ ವ್ಯಾಪಾರವೂ ಹೀಗೆಯೇ.

ಕವಿಗೂ ಮನದಲ್ಲಿ ಹುಟ್ಟಿದಷ್ಟು ಅನುಭವವನ್ನು ಅವನ ಮಹತ್ವದ ಮಾತೂ ತಿಳಿಸಲಾರದು. ಅನೇಕ ಸಹೃದಯರು " **ಆ ಮಹಿಮನ ಮನದಲ್ಲಿ ಏನು ಭಾವವೋಡಿತೋ?** " ಎಂದು ಕವಿಯ ವಾಕ್ಯದಲ್ಲಿ ಮರುಳಾಗಿ ಹೋಗಿರುವರು. ಕವಿಯಾಗಿಯೂ ಸಹೃದಯನಾಗಿಯೂ ಇದ್ದದ್ದರಿಂದ ಕಾಳಿದಾಸನು " **ಚಿತ್ರೇನಿವೇಶ್ಯ ಪರಿಕಲ್ಪಿತಸತ್ವಯೋಗಾ** " ಎಂದು ಮೊದಲು ಹೇಳಿದ್ದು ಸರಿಯಲ್ಲ; " **ಮನಸಾಕೃತಾನು?** " ಎಂದರೆ ಮನಸ್ಸಿನಲ್ಲಿ ಚಿತ್ರಿಸಿ ಅದಕ್ಕೆ ಜೀವಕಳೆಯನ್ನು ತುಂಬಿ ಬ್ರಹ್ಮನು ನಿರ್ಮಿಸಿರಬೇಕು; ಎಂದು ಹೇಳಬೇಕಾಗಿತ್ತು,' ಎಂದು ಹೇಳುವನು. ತಿರಿಗಿಯೂ ಯೋಚಿಸುವನು. ಈ ವರ್ಣನೆಯಲ್ಲಿಯೂ ತೃಪ್ತಿಹೊಂದದೆ (" **ರೂಪೋಚ್ಚಯೇನ ವಿಧಿನಾ ಮನಸಾಕೃತಾನು?** ") ರೂಪೋಚ್ಚಯೇನ ಎಂಬುದೊಂದು ವಿಶೇಷಣವನ್ನು ಸೇರಿಸುವನು. ಈ ವಿಶೇಷಣದಿಂದ ಏನು ಔಚಿತ್ಯ ಬಂದಿತು ವಿಚಾರ ಮಾಡೋಣ. ಆರ್ಯಕ್ಷೇಮೀಶ್ವರನು " **ದೃಷ್ಟಂ ಕಿಮಪಿ ಲೋಕೇಸ್ಮಿನ್ ನ ನಿರ್ದೋಷಂ ನ ನಿರ್ಗುಣಂ** " ಎಂದು ಹೇಳುವಂತೆ ಸಮಸ್ತ ಭಾಗದಲ್ಲಿಯೂ ಅನ್ಯೂನಾತಿರಿಕ್ತವಾಗಿ ಮನೋಹರತೆಯನ್ನೆ ಹೊಂದಿರುವ ಪದಾರ್ಥವು ಲೋಕದಲ್ಲೇ ಇಲ್ಲ. ಆಹ್ಲಾದಕವಾದ ಚಂದ್ರಬಿಂಬದಲ್ಲಿಯೂ ಕಳಂಕವಿರುವುದು. ಸುವಾಸನೆಯುಳ್ಳ ಗುಲಾಬಿ ಹೂವೂ ಮುಳ್ಳುಗಳ ಮಧ್ಯದಲ್ಲಿ ಬೆಳೆಯುವುದು. ರಮಣೀಯವಾದ ನದಿಯ ಪ್ರವಾಹಗಳಲ್ಲಿಯೂ ಅಪಾಯಭೀತಿಯು ಇರುವುದು. ಕೋಮಲವಾಗಿ ಶ್ಲಾಘ್ಯವಾದ ವಾಸನೆಯುಳ್ಳ ಮಲ್ಲಿಗೆಯೂ ಮುಟ್ಟಿದರೆ ಕಂದಿನಾರುವುದು. ಸರಸವಾದ ಗುಣಗಳು ವಿರಸವಾದ ಗುಣಗಳೊಡನೆಯೇ ವಸ್ತುಗಳಲ್ಲಿ ಬೆರಸಿಯೇ ಇರುವುವು. ಆಹ್ಲಾದ ವಸ್ತುಗಳನ್ನು ಮನಸ್ಸಿನಲ್ಲಿ ತಂದುಕೊಂಡಾಗ ಅವುಗಳಲ್ಲಿರುವ ವಿರಸಗುಣಗಳೊಡನೆಯೇ ಸರಸಗುಣಗಳು ಮನಸ್ಸಿಗೆ ಪ್ರತಿಫಲಿಸುವುವು. ಅದಕ್ಕಾಗಿ ಕವಿಯು " **ರೂಪೋಚ್ಚಯೇನ** " ಎಂಬ ವಿಶೇಷಣವನ್ನು ಸೇರಿಸಿ ಆ ವಿಶೇಷಣ ಬಲದಿಂದ ವಿರಸಗುಣಲೇಶವೂ ಮನಕ್ಕೆ ಬಾರದಂತೆಯೂ, ಸರಸಗುಣಗಳೇ ಗೋಚರಿಸುವಂತೆಯೂ, ಮಾಡಿರುವನು. ಚತುರನಾದ ಬ್ರಹ್ಮನು ಚಂದ್ರನಲ್ಲಿರುವ ಕಾಂತಿಯನ್ನೂ ಮುತ್ತಿನಲ್ಲಿರುವ ಲಾವಣ್ಯವನ್ನೂ ಪುಷ್ಪದಲ್ಲಿರುವ ವಾಸನೆಯನ್ನೂ ಮಧುರವಾದ ದ್ರಾಕ್ಷಾದಿಗಳಲ್ಲಿರುವ ಮಾಧುರ್ಯವನ್ನೂ ಹೀಗೆಯೇ ಯಾವ ಯಾವ ಸುಂದರವೆನಿಸಿಕೊಂಡ ವಸ್ತುಗಳಲ್ಲಿ ಯಾವ ಯಾವ ಸೌಂದರ್ಯಭಾಗವು ಅತಿಶಯಾಧಾಯಕವೋ ಅವುಗಳೆಲ್ಲವನ್ನೂ ತಂದು ಒಟ್ಟುಗೂಡಿಸಿ ಆ

ಸಂಭಾರ ಸಾಮಗ್ರಿಯಿಂದ ಮನಸ್ಸಿನಲ್ಲಿಯೇ ಒಂದು ಆಕೃತಿಯನ್ನು ಕಲ್ಪಿಸಿ ಸರ್ವ ವ್ಯಾಪಕನಾದ ಭಗವಂತನು ತನಗೆ ದಯಪಾಲಿಸಿದ ಶಕ್ತಿಪರಾಕಾಷ್ಠೆ ಯೆಲ್ಲವನ್ನೂ ಉಪಯೋಗಿಸಿ ಒಂದು ರೂಪವನ್ನು ಮಾಡಿ ಜೀವ ತುಂಬಿಸಿರಬಹುದು, ಎಂದು ಯೋಚಿಸುವನು. ಹಾಗೂ ತಾನು ವರ್ಣಿಸಿದ ವಸ್ತುವಿನ ಸೌಂದರ್ಯವನ್ನು ತನ್ನ ಶಬ್ದ ಶಕ್ತಿಯಿಂದ ನಮ್ಮ ಮನೋಭಿತ್ತಿಯಲ್ಲಿ ಬರೆದು ತೋರಿಸಿ ಆನಂದವನ್ನು ಹುಟ್ಟಿಸುತ್ತಿ ರುವನು. ಸಹೃದಯರೇ ಸಾಕ್ಷಿ. ಆ ಮೇಲೆ ಕವಿಯು ಇಂಥ ನಿರ್ಮಾಣಶಕ್ತಿಯು ಚಿತ್ರ ಸೃಷ್ಟಿ ಕುಶಲನಾದ ಸಾಕ್ಷಾತ್ ಬ್ರಹ್ಮನಲ್ಲಿಯೂ ಇಲ್ಲವೆಂದು ನಮಗೆ ಉಪದೇಶಿಸಲು ಹೊರಟು “ ಸ್ತ್ರೀ ರತ್ನಸೃಷ್ಟಿರಪರಾ ಪ್ರತಿಭಾತಿ ಸಾಮೇ ಧಾತುರ್ವಿಭುತ್ವಮ ನುಚಿಂತ್ಯವಪುಶ್ಚ ತಸ್ಯಾಃ ” ಎಂದು ಹೇಳುವನು. ಈ ಶಕುಂತಲೆಯನ್ನು ನಿತ್ಯವೂ ಸೃಷ್ಟಿಕರ್ಮದಲ್ಲಿ ಕೌಶಲವನ್ನು ಪ್ರಕಾಶಗೊಳಿಸುತ್ತಿರುವ ಆ ಬ್ರಹ್ಮನು ಸೃಷ್ಟಿಸಲಿಲ್ಲ; ಬೇರೆ ಯಾವನೋ ಒಬ್ಬ ಆತನಿಗಿಂತಲೂ ಚತುರನಾದ ಬ್ರಹ್ಮನು ಸೃಷ್ಟಿಸಿರಬೇಕು. ಎಂದು ಹೇಳುವನು. ನಿಜವಾದ ಶಕುಂತಲೆಯಲ್ಲಿ ಕಾಳಿದಾಸನ ಶಕುಂತಲೆಯ ಸೌಂದರ್ಯ ಸೌಕುಮಾರ್ಯಾದಿ ಪ್ರಭಾವಗಳು ತಿಲಮಾತ್ರಕ್ಕಾದರೂ ಇದ್ದಲ್ಲಿ ಕವಿಯ ವಾಕ್ಯದಲ್ಲಿ ಅವಿಶ್ವಾಸ ಹುಟ್ಟಬಹುದು? “ ರವಿಕಾಣದ ಕವಿಕಂಡ ” ಎಂಬುದು ಸುಳ್ಳಲ್ಲ. ಇಂಥ ಶಕುಂತಲೆಯನ್ನು ರವಿನೋಡುವನೆ? ಪ್ರಪಂಚದಲ್ಲಿ ಹುಟ್ಟಿದರಲ್ಲವೆ ನೋಡುವನು? ಇಷ್ಟೇ ಅಲ್ಲದೆ ಕವಿಗಳಲ್ಲಿ ಅನ್ಯಾದೃಶವಾದ ಮತ್ತೊಂದು ಶಕ್ತಿಯುಂಟು. ಕವಿಬಿಟ್ಟರೆ ಮತ್ತು ಯಾರಲ್ಲಿಯೂ ಅಂಥ ಶಕ್ತಿಯು ಇರುವುದಿಲ್ಲ. ಅದೇನೆಂದರೆ ಇತರ ಕಲಾಕುಶಲರು ಎಷ್ಟು ಸಮರ್ಥರಾದರೂ ವಸು ಗಳಲ್ಲಿರುವ ಹೊರಗಣ ಶರೀರಗತವಾದ ವಿಕಾರಗಳನ್ನು ತೋರಿಸಬಲ್ಲರೇ ಹೊರತು ಅವುಗಳ ಪ್ರತ್ಯಕ್ಷಕಾಲದಲ್ಲಿ ನಮ್ಮ ಮನಸ್ಸಿನಲ್ಲಿ ಓಡುತ್ತಿರುವ ಅನುಭಾವಾದಿಗಳನು ತೋರಿಸಲಾರರು. ಸೌಂದರ್ಯವುಳ್ಳ ವಸ್ತುದರ್ಶನದಲ್ಲಿ ಮನಸ್ಸಿನಲ್ಲಿ ಹುಟ್ಟುವ ಹರ್ಷವನ್ನೂ ದುಃಖಕರವಾದ ವಸ್ತುದರ್ಶನದಲ್ಲಿ ಮನಸ್ಸಿನಲ್ಲಿ ಹುಟ್ಟುವ ವಿಷಾದ ವನ್ನೂ ತಿಳಿಸಬಲ್ಲರೆ? ಕೋಪತಾಪಗಳಲ್ಲಿ ಶರೀರದಲ್ಲಿ ಕಂಡುಬರುವ ಸ್ವೇದಾಶ್ರು ಸ್ತಂಭಾದಿಗಳನ್ನೂ ಚಿತ್ರಿಕನು ತೋರಿಸಬಲ್ಲನೆಂದಿಟ್ಟುಕೊಂಡರೂ ಕುಪಿತನಾದವನ ಇಲ್ಲವೆ ಆರ್ದ್ರಚಿತ್ತವುಳ್ಳವನ ಮನೋಭಾವವನ್ನೂ ಅದರೊಡನೆ ಹೊರಡುವ ಶಬ್ದ ಜಾಲವನ್ನೂ ತಿಳಿಸುವನೆ? ಇದೇ ಆಗದೆ ಇದ್ದಾಗ ಅವನನ್ನು ನೋಡುತ್ತಿದ್ದವರ ಮನೋಭಾವವನ್ನೂ ಅವನಿಂದ ವಿವರಿಸಲಾದೀತೆ? ಹಡಗು ಬಂಡೆಗೆ ಬಡಿದು

ಒಡೆಯುವುದನ್ನೂ ರೈಲು ಸೇತು ಮುರಿದು ನದಿಯಲ್ಲಿ ಬೀಳುವುದನ್ನೂ ಊರು ಹತ್ತಿ ಕೊಂಡು ಉರಿಯುವುದನ್ನೂ ಛಾಯಾಗ್ರಾಹಿಯೂ, ಚಿತ್ರಿಕನೂ, ಒಂದುವೇಳೆ ಶಿಲ್ಪಿ ಕನೂ ನಿಮಗೆ ಪ್ರತ್ಯಕ್ಷ ಮಾಡಿಸಬಹುದು. ಆ ಕಾಲದಲ್ಲಿ ಆ ಅಪಾಯಕ್ಕೆ ಸಿಕ್ಕಿಬಿದ್ದ ಮನುಷ್ಯರ ಗಾಬರಿ, ಸಂಕಟ, ವೈರಾಗ್ಯ-ಪ್ರಕಾರ, ಪ್ರತಿಯೊಬ್ಬನೂ ಆಡುವ ಮಾತೂ ಇವೇ ಮೊದಲಾದ ವ್ಯಾಪಾರಗಳನ್ನು ಇವರಲ್ಲಿ ಯಾರಿಗೆ ತೋರಿಸಲು ಸಾಧ್ಯ ವಾದೀತು? ಯೋಚಿಸಿರಿ. ಗದಾಯುದ್ಧದಲ್ಲಿ ಭೀಮಸೇನನ ಕೋಪವನ್ನು ಕರ್ಣಾಟಕ ಕವಿಚಕ್ರವರ್ತಿಯೆಂಬ ಬಿರುದನ್ನು ತೈಲಪಚಕ್ರವರ್ತಿಯಿಂದ ಪಡೆದ ರನ್ನನು ವರ್ಣಿಸಿ ರುವ ಪದ್ಯಗಳನ್ನು ಓದುವಾಗ ಇಷ್ಟೊಂದು ಕಾರ್ಯಗಳನ್ನು ಕವಿಯು ನಾಲ್ಕು ಮಾತುಗಳಲ್ಲಿಯೇ ಹೇಗೆ ತೋರಿಸಬಲ್ಲನು? ಎಂಬ ವಿಸ್ಮಯವು ಪಾಠಕರ ತಲೆ ಯನ್ನು ತೂಗಿಸದೆ ಇರದು. ನಾಟಕದಲ್ಲಿ ಈ ಕವಿಶಕ್ತಿಯನ್ನು ನೋಡಿರಿ ಕವಿಯು ನಾಯಕನಾಯಿಕೆಯರಿಗೂ, ಪಾಠಕರಿಗೂ ತಾದಾತ್ಮ್ಯಜ್ಞಾನವನ್ನು ಹುಟ್ಟಿಸುವನು. ಆ ತಾದಾತ್ಮ್ಯಜ್ಞಾನವು ತಾವೇ ಅನುಭವಿಸಿದ್ದಲ್ಲಿ ಉಂಟಾಗುವ ಅನುಭವಗಳನ್ನು ಪ್ರೇಕ್ಷಕರಲ್ಲಿ ಹುಟ್ಟಿಸುವುದು. ಸಹೃದಯರಾದ ಪಾಠಕರು ಶಾಕುಂತಲ ನಾಟಕ ವನ್ನು ಓದುವಾಗ ದುಷ್ಯಂತನೇ ಆಗಿಹೋಗುವರು. ದುಷ್ಯಂತನು ಅನುಭವಿಸಿದ ಹರ್ಷಾದಿಗಳನ್ನು ತಾವು ಅನುಭವಿಸುವರು. ಅವನು ಉತ್ಸಾಹದಿಂದ ಉತ್ತೇಜಿತ ನಾದಂತೆ ಇವರೂ ಉತ್ತೇಜಿತರಾಗುವರು. ಹೀಗೆ ತಾವೂ ದುಷ್ಯಂತನಾಗಿ ಹೋಗುತ್ತಿದ್ದರೂ ತಾವು ಓದುವವರೂ ಅಥವಾ ಪ್ರೇಕ್ಷಕರೆಂಬ ಭಾವವನ್ನು ಮರೆ ಯುವರು. ದುಷ್ಯಂತನು ಶಕುಂತಲೆಯನ್ನು "ಇದು ಸಾಮಾನ್ಯ ಸ್ತ್ರೀಯು ರಾಜನನ್ನು ಸೇರುವ ಕಾಪಟ್ಯ"ವೆಂದು ಹೇಳಿ ವಿಮುಖನಾಗಿ ತಿರಸ್ಕರಿಸಿದಾಗ ದುಷ್ಯಂತನ ಮೇಲೆ ತಮಗೆ ಕೋಪಹುಟ್ಟಿತಲ್ಲವೆ? ಮೇನಕೆಯು ಶಕುಂತಲೆಯನ್ನು ಎತ್ತಿಕೊಂಡು ಹೋದಾಗ "ದುಷ್ಯಂತನಿಗೆ ಹಾಗೆಯೇ ಆಗಬೇಕು. ನಿರ್ಘೃ ಣನು; ಏನೂ ತಿಳಿಯದ ನಿರಪರಾಧಿಯಾದ ಶಕುಂತಲೆಯನ್ನು ಹಾಗೆ ಹೇಳ ಬಹುದೆ?" ಎಂಬ ನಿಗ್ರಹವು ತಲೆದೋರಿತಲ್ಲವೆ? ದುಷ್ಯಂತನು ಸಂಗೀತವನ್ನು ಕೇಳಿದಾಗ ಖಿನ್ನನಾಗಿ ರಾಜ್ಯವ್ಯಾಪಾರದಲ್ಲಿ ಬೇಸರಿಕೆಯುಳ್ಳವನಾದಾಗ, ಅವ ನಂತೆ ತಮ್ಮಲ್ಲಿ ಬೇಸರಿಕೆ ಹುಟ್ಟಲಿಲ್ಲ. ಆದರೆ "ಅಯ್ಯೋ! ಪಾಪ! ಅವನ ತಪ್ಪಲ್ಲ; ದೂರ್ವಾಸಶಾಪದ ಮಹಿಮೆ! ಏನುಮಾಡಾನು? ಎಷ್ಟು ಶೀಘ್ರವಾಗಿ ಶಕುಂತ ಲೆಯ ಸಂಶ್ಲೇಷವನ್ನು ಹೊಂದುವನೋ" ಎಂಬ ಕನಿಕರ ಹುಟ್ಟಿತಲ್ಲವೆ?

ದುಷ್ಯಂತನು ಮರೆಯಲ್ಲಿ ನಿಂತುಕೊಂಡು ಭ್ರಮರಬಾಧೆಗೆ ಈಡಾದ ಶಕುಂತಲೆಯನ್ನು ನೋಡಿ:—

"ಯತೋಯತಷ್ಷಟ್ಚರಣೋಭಿವರ್ತತೇ ।
ತತಸ್ತತ: ಪ್ರೇರಿತ ಲೋಲ ಲೋಚನಾ ॥
ವಿವರ್ತಿತಭ್ರೂರಿಯಮದ್ಯ ಶಿಕ್ಷ್ಯತೇ
ಭಯಾದಕಾಮಾಪಿ ಹಿ ದೃಷ್ಟಿವಿಭ್ರಮಮ್ ॥ ೧ ॥

"ಚಲಾಪಾಂಗಂ ದೃಷ್ಟ: ಸ್ಪೃಶಸಿ ಬಹುಶೋ ವೇಪಥುಮತೀಂ
ರಹಸ್ಯಾಖ್ಯಾಯೀವ ಸ್ವನಸಿಮೃದು ಕರ್ಣಾಂತಿಕಚರ: ।
ಕರಂ ವ್ಯಾಧೂನ್ವತ್ಯಾಃ ಪಿಬಸಿ ರತಿಸರ್ವಸ್ವಮಧರಂ ।
ವಯಂ ತತ್ವಾನ್ವೇಷಾನ್ಮಧುಕರ ಹತಾಸ್ತ್ವಂಖಲುಕೃತೀ ॥"

ಎಂದು ಹೇಳಿದಾಗಲೂ, ಮತ್ತು ಶಕುಂತಲೆಯು ಅವನ ಸಂಶ್ಲೇಷದಿಂದ ಸಡಲಿ ಗೌತಮಿಯೊಡನೆ ಹೋದಮೇಲೆ ಅವಳ ಸಂಶ್ಲೇಷ ಸುಖದ ಸ್ಮರಣೆಯಲ್ಲಿ—

"ಮುಹುರಂಗುಲಿ ಸಂವೃತಾಧರೋಷ್ಠಂ ।
ಪ್ರತಿಷೇಧಾಕ್ಷರ ವಿಕ್ಲವಾಭಿರಾಮಂ ॥
ಮುಖಮಂ ಸವಿವರ್ತಿ ಪಕ್ಷ್ಮಲಾಕ್ಷ್ಯಾ:
ಕಥಮಪ್ಯುನ್ನಮಿತಂ ನ ಚುಂಬಿತಂ ತು ॥"

ಎಂದು ಅನುತಾಪಪಟ್ಟು ಹೇಳಿದ ಪದ್ಯವನ್ನು ಕೇಳಿದಾಗಲೂ ಪಾಠಕರ ಮನೋಭಿತ್ತಿಯಲ್ಲಿ ಏನು ಇಂದ್ರಜಾಲ ಮಾಡಿದನೋ ಅದನ್ನು ಸಾಧ್ಯವಾದ ಮಟ್ಟಿಗೆ ವಿವರಿಸುವೆನು.

ಮೊದಲನೆಯ ಪದ್ಯ—ಮೊದಲು ನದಿಯ ತೀರವು. ಆ ತೀರದಲ್ಲಿ ಸೊಂಪಾಗಿ ಬೆಳೆದ ವೃಕ್ಷಗಳು. ಆ ವೃಕ್ಷಗಳ ಮಧ್ಯದ ಕಾಲುದಾರಿಗಳು. ಆ ಕಾಲುದಾರಿಗಳ ಉಭಯ ಪಾರ್ಶ್ವದಲ್ಲಿ ಬೆಳೆದಿರುವ ಹೂಬಿಡುವ ಗಿಡಗಳೂ ಲತೆಗಳ ಪೊದರುಗಳೂ ಉಳ್ಳವನೋದ್ದೇಶವು ನಮ್ಮ ಮನಶ್ಚಕ್ಷುಸ್ಸಿಗೆ ಗೋಚರವಾಗುವುದು. ಮತ್ತು ಶಕುಂತಲೆಯು ಸಖಿಗಳು ವೃಕ್ಷಲತೆಗಳಿಗೆ ಬಿಂದಿಗೆಗಳಿಂದ ನೀರು ಸುರಿಯುತ್ತಿರುವುದು,

ಮತ್ತೊಂದು ಕಡೆ ಮುಖ ತಿರಿಗಿಕೊಂಡು ಶಕುಂತಲೆಯು ಮಾಧವೀಲತೆಗೆ ನೀರು ಹೊಯ್ಯುವುದು ತೋರುವುದು. ನೀರು ಹೊಯಿದ ಕೂಡಲೆ ಪುಷ್ಪಗುಚ್ಛದಲ್ಲಿ ಮುತ್ತಿಕೊಂಡು ಮಧುಪಾನ ಮಾಡುತ್ತಿರುವ ಮಧುಪಗಳು ಜೊಯ್ಯೆಂದು ಮೇಲಕ್ಕೆ ಎದ್ದು ಅವಳ ಮುಖವನ್ನು ಮುತ್ತಿಕೊಳುವುದೂ, ಅವುಗಳ ಬಾಧೆಗೆ ಅವಳು ಪಡುವ ಕಷ್ಟವೂ ಒಂದರ ಮೇಲೊಂದು ಗೋಚರಿಸುವುವು. ಆಗ ಅವಳ ಶರೀರದ ಚಲನೆಯೂ, ದೃಷ್ಟಿವ್ಯಾಪಾರವೂ, ಸಾಕ್ಷಾತ್ಕರಿಸಲ್ಪಡುವುವು. ಇಷ್ಟು ಮನೋಹರ ವ್ಯಾಪಾರವನ್ನು ಚಿತ್ರಿಕನು, ಶಿಲ್ಪಿಕನು, ಛಾಯಾಗ್ರಾಹಿಯು, ಸಿನಿಮಿಟೋಗ್ರಾಫನು, ದುಷ್ಯಂತನೊಡನೆ ನಿಂತು ನೋಡುವುದಾಗಿದ್ದರೆ ಒಂದು ವೇಳೆ ತೋರಿಸಬಹುದಾಗಿದ್ದಿತು. ಅಂಥ ನೋಟವು ಅವರಿಗೆ ಎಂದೂ ಲಭಿಸತಕ್ಕುದಲ್ಲ. ಕವಿಯು ತನ್ನ ಮನಸ್ಸಿನಿಂದಲೇ ನಿರ್ಮಿಸಿದ ನೋಟವಲ್ಲವೆ? ಅದೂ ಇರಲಿ; ಆ ನೋಟದೊಡನೆ ದುಷ್ಯಂತನ ಮನಸ್ಸಿನಲ್ಲಿ ಹುಟ್ಟಿದ ಅಸೂಯೆಯೊಡನೆ ಕೂಡಿದ ಅಭಿಲಾಷೆಯು ಯಾರಿಂದ ನಿರೂಪಿಸಲಾದೀತು? ಜಗತ್ಸೃಷ್ಟ್ಯವಾದ ಚತುರ್ಮುಖನಿಗೇನೇ ಅಸಾಧ್ಯವೆಂದು ಹೇಳುವಾಗ ಕವಿಯಲ್ಲದ ಮತ್ತೆ ಯಾರು ಆ ಆ ಶಯುವನ್ನು ನಿರೂಪಿಸಬಲ್ಲರು? “ ಓ ಭ್ರಮರವೇ, ನೀನೇ ಧನ್ಯನು. ನಾನು ನಿನ್ನ ಅನುಭವವನ್ನು ಅನುಭವಿಸುವಷ್ಟು ಪುಣ್ಯ ಮಾಡಲಿಲ್ಲವಲ್ಲಾ! ಸುಮ್ಮನೇ ನಾನು ಆಶೆಯಿಂದ ಇಲ್ಲಿ ಒದರಿಕೊಳ್ಳುವುದಾಯ್ತು! ನಾನು ನೋಡುತ್ತಿದ್ದ ಹಾಗೆಯೇ ನೀನು ಅವಳ ಅಧರವನ್ನು ಪಾನ ಮಾಡುತ್ತೀಯಲ್ಲಾ! ” ಎಂಬ ದುಷ್ಯಂತನ ಮನೋಭಾವವು ಹೊಳೆಯಲಿಲ್ಲವೆ? ಈ ಅನುಭವವನ್ನು ದುಷ್ಯಂತನು ಮಾತ್ರವೇ ಅನುಭವಿಸಲಿಲ್ಲ ಪಾಠಕರಾದ ನೀವೂ ನಾನೂ ಎಲ್ಲರೂ ಅನುಭವಿಸುವರು. ಮೂರನೆಯ ಪದ್ಯದಲ್ಲಿ ಒಂದೊಂದು ವಿಶೇಷ್ಯದಲ್ಲಿ ಎಷ್ಟು ಹೃದಯಂಗಮವಾದ ಅಭಿಪ್ರಾಯವು ಅಡಗಿರುವುದೋ ನಾನು ಹೇಳಲಾರೆನು. “ ಮುಹು: ಅಂಗುಳಿಸಂವೃತಾಧರೋಷ್ಠಂ ” “ ಪ್ರತಿಷೇಧಾಕ್ಷರ ವಿಕ್ಲವಾಭಿರಾಮಂ ” “ ಮುಖಮಂಸವಿವರ್ತಿ ” “ ಪಕ್ಷ್ಮಲಾಕ್ಷ್ಯಾಃ ” “ ಕಥಮಪಿ ” “ ಉನ್ನಮಿತಂ ” “ ನಚುಂಬಿತಂ ” ಈ ವಿಶೇಷಣಗಳಲ್ಲಿ ಅಡಗಿರುವ ಅಭಿಪ್ರಾಯ ಪ್ರಪಂಚವನ್ನು ಮಾತು ತಿಳಿಸಲಾರದು. ಮನಸ್ಸೇ ತಿಳಿಸಬೇಕು. ಒಂದೊಂದು ವಿಶೇಷಣದ ಸ್ವಾರಸ್ಯವನ್ನು ನಿಧಾನವಾಗಿ ಯೋಚಿಸಿದಲ್ಲಿ ಅನುಭಾವಗಳ ಒಂದು ಪ್ರಪಂಚವೇ ಉಂಟಾಗುವುದು. ಅವನ್ನು ಎಷ್ಟೆಷ್ಟು ಯೋಚಿಸಿದರೂ ವರ್ಣಿಸಿದರೂ ಸಾಲದು.

ವಿವಂಚ—ಕವಿಗಳು ಶಬ್ದಶಕ್ತಿಯಿಂದ ಮನೋಮುಕುರದಲ್ಲಿ ಪ್ರತ್ಯಕ್ಷ ಸಮಾನಾಕಾರವಾದ ದರ್ಶನವನ್ನು ಹುಟ್ಟಿಸಿ ಪ್ರತ್ಯಕ್ಷ ವೇಳೆಗಿಂತಲೂ ಅತಿಶಯವಾದ ಆನಂದವನ್ನು ಜನಿಸಿ ಆ ಆನಂದವು ನಾಯಕನ ಮನಸ್ಸಿನಲ್ಲಿ ಉಂಟಾದುದಕ್ಕಿಂತ ಅನೇಕಪಾಲು ಅಭಿವೃದ್ಧವಾಗಿ ಪಾಠಕರ ಹೃದಯದಲ್ಲಿ ತೋರುವಂತೆ ಮಾಡುವರು. ಶಕುಂತಲೆಯನ್ನು ಪತಿಯ ಗೃಹಕ್ಕೆ ಕಳುಹಿಸಿ ಕೊಟ್ಟ ಕಣ್ವರೊಡನೆ ಕಂಠಸ್ತಂಭಿತ ಬಾಷ್ಪವೃತ್ತಿಗಳಾಗಿ ಅಳುವಂತೆಯೂ, ಅನೇಕ ವೇಳೆ ಬೆಸ್ತರೊಡನೆ ಬೆಸ್ತರಾಗಿ ಕುಣಿವಂತೆಯೂ, ಸೇವಕರಂತೆ ಸೇವಕರಾಗಿ ಆಜ್ಞಾಪಾಲನ ಮಾಡುವಂತೆಯೂ, ವೀರರೊಡನೆ ವೀರವಾದವನ್ನು ಅನುಕರಿಸುವಂತೆಯೂ, ಒಟ್ಟೇನು? ಅಳುವವರ ಜತೆ ಅಳಿಸಿಯೂ, ನಗುವವರೊಡನೆ ನಗಿಸಿಯೂ, ಓಡುವವರೊಡನೆ ಓಡಿಸಿಯೂ, ಕವಿಯು ತಾನು ಇಷ್ಟಪಟ್ಟದ್ದನ್ನು ತನ್ನ ಪಾಠಕರಿಂದ ಮಾಡಿಸುವನು. ಈ ರೀತಿಯಲ್ಲಿ ಕವಿಯು ತನ್ನ ಛಾತ್ರಭಾವವನ್ನು ಆಶ್ರಯಿಸಿದವಂಗೆ ನಾನಾ ವಿಧವಾದ ಲೋಕಾನುಭವವನ್ನು ಬೇಸರ ಹುಟ್ಟದಂತೆ ಶಿಕ್ಷಿಸುವನು. ಈ ವಿಚಾರದಲ್ಲಿ ಇನ್ನೂ ಬಹಳ ಹೇಳಬೇಕಾದ ವಿಷಯಗಳಿವೆ. ಅದಿರಲಿ.

ಲೋಕದಲ್ಲಿ ವಿಷಯಗಳನ್ನು ಸ್ಪಷ್ಟವಾಗಿ ಹೇಳುವುದಕ್ಕಿಂತ ತಾನಾಗಿಯೇ ಊಹೆಗೆ ಬರುವಹಾಗೆ ಮಾಡುವುದು ಸುಖಾತಿಶಯಜನಕವೆಂದು ಎಲ್ಲರ ಅನುಭವಕ್ಕೂ ಬಂದಿರುವುದು. ಈ ವಿಷಯದಲ್ಲಿ ಕವಿಗಳ ಸಾಮರ್ಥ್ಯವು ಎಲ್ಲೆಯನ್ನು ಮೀರಿರುವುದು. ಕಾವ್ಯದಲ್ಲಿ ಈ ರೀತಿಯಲ್ಲಿ ವಿಷಯವನ್ನು ಹೇಳುವುದನ್ನು ವ್ಯಂಗ್ಯವೆಂದು ಕರೆವರು. ವ್ಯಂಗ್ಯಪ್ರಧಾನವಾದ ಕಾವ್ಯವೇ ಉತ್ತಮ ಕಾವ್ಯವೆಂದು ಪರಿಗಣಿತವಾಗಿರುವುದು. ಸಂತೋಷಾತಿಶಯವನ್ನು ಹುಟ್ಟಿಸುವುದೇ ವ್ಯಂಗ್ಯಕ್ಕೆ ಮುಖ್ಯ ಪ್ರಯೋಜನವು. ಸಂಭಾಷಣವು ಬಹಳ ರಮಣೀಯವಾಗಿತ್ತೆಂದು ಹೇಳಿಸಿಕೊಳ್ಳಬೇಕಾದರೆ ಆ ಸಂಭಾಷಣದಲ್ಲಿ ವ್ಯಂಗ್ಯಗರ್ಭಿತವಾದ ಮಾತುಗಳೂ, ಹಾಸ್ಯಗಳೂ, ಉಕ್ತಿಚಮತ್ಕಾರಗಳೂ ಇದ್ದಿರಬೇಕು. ಸಂಭಾಷಣದಲ್ಲಿ ಕಂಡುಬರುವ ಈ ಗುಣಗಳ ಪರಾಕಾಷ್ಠೆಯನ್ನು ಕವಿಗಳ ಗ್ರಂಥಗಳಲ್ಲಿ ನೋಡಬಹುದು. ಉದಾಹರಣೆಗಾಗಿ ಒಂದೆರಡು ಪದ್ಯಗಳನ್ನು ಉದಾಹರಿಸುವೆನು.

ಸೂಳೆಗೇರಿ—

ಗಂಡವನೊರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟರೆಂದೊಡಾ ।
ಪೆಂಡಿರರೂಪುಮಂ ಸೊಬಗುಮಂ ಭವಮಂ ಪೆಸರ್ಗೊಳ್ವುದೇಮಮಾ ॥

ಗೊಂಡಳವಂಗವಂ ರತಿಯೆವಲ್ ಚದುರೆತ್ತಣದಾಕೆಗೆಂದು ಕ ।
ಣ್ಗೊಂಡ ವಿಲಾಸದಿಂ ನಗುವುದಲ್ಲಿಯ ವಾರವಿಲಾಸಿನೀಜವಂ ॥

ಹೈಮಂತಋತು—

ತಿಳಿವೊಡೆ ಶಶಿರವಿ ರವಿಶಶಿ ।
ಬೆಳಗುವ ಜೊನ್ನಂ ಬಿಸಿಲ್ ಬಿಸಿಲ್ ತಾಂ ಜೊನ್ನಂ ॥
ಚಳಿ ಬಿಸುಪು ಬಿಸುಪು ಚಳಿಯೆನೆ ।
ಬಳೆದುದು ಹಿಮರಾಜ ತೇಜವಿೂಜಗದೆಡೆಯೊಳ್ ॥

ಆ ಸಮಯದೊಳ್—

ಪಲ್ವರೆಯೊಳ್ ಹುಹುಯೆಂಬಾ ।
ಚಲ್ವುಗ್ಗಡಣೆಯೊಳೆ ಹಸ್ತದಂಡಿಗೆಯೊಳೆ ತಾ ॥
ನೊಲ್ವನ್ನಂ ಶಿಶಿರವಟಂ ।
ಸಾಲ್ವನ್ನಂ ಜವವನಾಡಿಸಿದ ಮರ್ವರೆಯೊಳ್ ॥

ಸ್ತ್ರೀರೂಪ—

ಕೆಡಿಸಿದನೇಕೆ ತಾವರೆಯ ನೀಮೊಗಮಂ ಪಡೆದೇಕೆನೆಯ್ದಿಲಂ ।
ಕೆಡಿಸಿದ ನೀತೆರಂಬೊಳೆವ ಕಣ್ಬೊಣರಂ ಪಡೆದೇಕೆ ತುಂಬಿಯಂ ॥
ಕೆಡಿಸಿದ ನೀವಿನೀಳಕುಟಿಲಾಳಕಮಂ ಪಡೆದೇಕೆ ಪದ್ಮಜಂ ।
ಕೆಡಿಸಿದ ನೀಕೆಯಂ ಪಡೆದು ಜಂಗಮಕಲ್ಪಲತಾವಿಲಾಸಮಂ ॥

ಈ ರೀತಿಯಾದ ಕವಿಗಳ ಉಕ್ತಿ ಪ್ರಪಂಚವನ್ನು ಉದಾಹರಿಸುತ್ತ ಹೋದರೆ ಕೊನೆ ಮೊದಲೇ ಇಲ್ಲದೆ ಹನುಮಂತನ ಬಾಲದಂತೆ ಬೆಳೆಯುವುದು. ಕವಿಗಳಲ್ಲಿ ಅನ್ಯಾದೃಶವಾದ ಮತ್ತೊಂದು ಪ್ರಬಲ ಶಕ್ತಿಯುಂಟು. ಲೋಕದಲ್ಲಿ ವಸ್ತುಗಳ ಜ್ಞಾನಸಂಪಾದನೆಗೆ ಒಬ್ಬ ಗುರುವು ಬೇಕು. ಅವನು ಎಲ್ಲವನ್ನೂ ಪ್ರೇಮಪುರಸ್ಸರವಾಗಿ ಕಲಿಸಬೇಕು. ಮತ್ತು ಶುಕ್ರನು ಹೇಳುವಂತೆ ಬುದ್ಧಿವಂತನಾದವನಿಗೆ “ ಆಚಾರ್ಯ: ಸರ್ವಚೇಷ್ಟಾಸು ಲೋಕ ಏವ ಹಿ ಧೀಮತಃ ” ಎಂಬ ಮರ್ಯಾದೆಯಲ್ಲಿ ತಾನೇ ಸಾವಧಾನವಾಗಿ ನೋಡಿ ಪರಾಂಬರಿಸಿ ತಿಳಿದುಕೊಳ್ಳುವ ಸಾಮರ್ಥ್ಯವೂ ಬೇಕು. ಅನೇಕವೇಳೆ ತಿಳಿದುಕೊಳ್ಳುವ ಸಾಮರ್ಥ್ಯವೂ ಇದ್ದು ಯತ್ನಿಸಿದರೂ ಒಬ್ಬ ಗುರುವಿಲ್ಲದಿದ್ದರೆ ವಿಷಯಗಳು ಶೀಘ್ರ ಸಿದ್ಧಿಸುವದಿಲ್ಲ. ಗುರುವು ನಾವು ನೋಡ

ಬೇಕಾದ ವಿಷಯಗಳನ್ನು ನೋಡಿಸಿ ಹೇಗೆ ನೋಡಬೇಕೆಂಬುದನ್ನು ತಿಳಿಸಿ ಅದರಿಂದ ತಿಳಿದುಕೊಳ್ಳಬೇಕಾದ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳುವಂತೆ ಮಾಡುವನು. ಇದೂ ಅಲ್ಲದೆ ನಾವು ತಿಳಿದುಕೊಳ್ಳಬೇಕಾದ ಎಲ್ಲಾ ವಿಷಯಗಳಿಗೂ ಒಬ್ಬನೆ ಗುರುವು ಸಿಕ್ಕುವುದು ಕಷ್ಟ. ಒಂದೊಂದು ವಿಷಯಕ್ಕೆ ಒಬ್ಬೊಬ್ಬ ಗುರುವು ಸಿಕ್ಕಿದರೆ ಹೆಚ್ಚು. ಒಂದೊಂದು ವಿಷಯ ಸಂಪಾದನೆಗೆ ಒಬ್ಬೊಬ್ಬ ಗುರುವನ್ನು ಹುಡುಕುತ್ತ ಹೋದರೆ ನಾವು ತಿಳುವಳಿಕೆಯುಳ್ಳವರೆನಿಸಿಕೊಳ್ಳುವದಕ್ಕೆ ಎಷ್ಟು ಕಾಲಬೇಕು ? ಎಷ್ಟು ಕಷ್ಟಪಡಬೇಕು? ಕವಿಯೆಂಬವನು ಎಲ್ಲಾ ತೆರದ ಗುರುಗಳ ಸಮಷ್ಟಿಯಾಗಿರುವನು. ಕವಿಯೆಂಬ ಗುರುವನ್ನು ಆಶ್ರಯ ಮಾಡಿದರೆ ನಮ್ಮ ಇಷ್ಟಾರ್ಥಗಳೆಲ್ಲವು ಸಿದ್ಧಿಸುವುವು. ಕವಿಯು ನಾವು ಕೇಳಿದ ವಿಷಯಗಳನ್ನೂ ನಾವು ತಿಳಿಯಬೇಕಾದ ವಿಷಯಗಳನ್ನೂ ನಮ್ಮ ಗ್ರಹಣ ಸಾಮರ್ಥ್ಯವನ್ನೂ ಪರಿಶೀಲಿಸಿ ಉಪದೇಶಿಸುವನು. ಕವಿಯು ನಮಗೆ ಉಪದೇಶಿಸುವ ಕಾಲದಲ್ಲಿ ರೂಪಾಂತರವನ್ನು ಹೊಂದಿಯೇ ಉಪದೇಶಿಸುವನು. ಅವನನ್ನು ಆಗ ಪದೇಪದೇ ಕೇಳುತ್ತಿದ್ದರೂ ಕೋಪ ಹುಟ್ಟದು. ಬೇಸರಿಕೆಯಿಲ್ಲ. ಆ ರೂಪಾಂತರದಲ್ಲಿದ್ದುಕೊಂಡು ನಮಗೆ ಕಣ್ಣನ್ನು ಕೊಟ್ಟು ಲೋಕದ ರಾಮಣೀಯಕತೆಯನ್ನು ತೋರಿಸುವನು. ಕಿವಿಯನ್ನು ಕೊಟ್ಟು ಶ್ರಾವ್ಯವಾದದ್ದನ್ನು ಕೇಳಿಸುವನು. ಹೀಗೆಯೇ ಯಾವ ಯಾವ ಇಂದ್ರಿಯಗಳು ಬೇಕೋ ಆಯಾ ಇಂದ್ರಿಯಗಳನ್ನು ಕೊಟ್ಟು ಎಲ್ಲಿಗೆ ಕರೆದುಕೊಂಡು ಹೋಗಬೇಕೋ ಅಲ್ಲಿಗೆ ಕರೆದುಕೊಂಡು ಹೋಗಿ ಆಯಾ ವಿಷಯಗಳನ್ನು ತೋರಿಸಿ ಹೇಳಿಕೊಡುವನು. ಪರಿಶೀಲನೆ ಮಾಡಿ ಸುಖಪಡುವಂತೆಯೂ ಮಾಡುವನು. ಸೂರ್ಯೋದಯದಲ್ಲಿ ಬೆಟ್ಟದ ಮೇಲೆ ಬಿಸಿಲು ಬೀಳದೆ ಇಲ್ಲ. ಅದನ್ನು ನಿತ್ಯವೂ ನಾವು ನೋಡುತ್ತಿದ್ದರೂ ಅತ್ತಕಡೆ ನಮ್ಮ ಮನಸ್ಸು ಹೋಗಲಿಲ್ಲ. ಕೊಳಗಳಲ್ಲಿ ಓಡಾಡುತ್ತಿರುವ ಕೊಕ್ಕರೆಗಳನ್ನೂ ಶಬ್ದಮಾಡುತ್ತಿರುವ ನೀರುಕೋಳಿಗಳನ್ನೂ ನಾವು ನೋಡದೆ ಇಲ್ಲ. ಮಕ್ಕಳ ಸಾವಿನಲ್ಲಿ ತಾಯಿತಂದೆಗಳು ದು:ಖಿಸುವುದನ್ನು ನೋಡದೆ ಇಲ್ಲ. ಬೆಟ್ಟದ ಮೇಲೆ ಪ್ರಾತ:ಕಾಲದಲ್ಲಿ ಬಿದ್ದ ಬಿಸಿಲಿನ ವರ್ಣನೆಯನ್ನು ಓದಿರಿ. ಕೊಳದ ವರ್ಣನೆಯನ್ನು ಓದಿರಿ. ಬಳಿಕ ಅದೇ ಸ್ಥಳಗಳನ್ನು ನೀವು ಹೋಗಿ ನೋಡಿರಿ. ಆಗ ಪೂರ್ವದಲ್ಲಿ ನಿಮ್ಮ ಮನಸ್ಸನ್ನು ಅಪಹರಿಸಿದ ಅಥವಾ ಅಪಹರಿಸಿದರೂ ಔದಾಸೀನ್ಯಕ್ಕೆ ವಿಷಯವಾದ ವಿಷಯಗಳೇ ಈಗ ಎಂಥ ಮನೋಹರವಾದ ದರ್ಶನವನ್ನು ಕೊಟ್ಟು ನಿಮ ಮನಸ್ಸನ್ನು ಅಪಹರಿಸಿ ಕರಗಿಸುವುವು. ವಸ್ತುಗಳೇನೋ ಹಿಂದೇ ಇದ್ದವೆ. ಅವು

ಗಳೇ ಕವಿಗಳಿಂದ ಶಿಕ್ಷಿತರಾದ ಮೇಲೆ ನಿಮ್ಮ ಮನಸ್ಸಿಗೆ ಬೇರೆ ಹೊಸ ವಸ್ತುಗಳಾಗು ವುವು. ಆ ಮೇಲೆ ಅವುಗಳ ದರ್ಶನದಿಂದ ಎಷ್ಟುಮಟ್ಟಿಗೆ ಆನಂದಪಡುವೆವೊ! ಅಂಥ ಆನಂದಪರೀವಾಹವು ಕಾವ್ಯರಸಪರಿಚಯವಿಲ್ಲದ, ಕವಿಗಳಲ್ಲಿ ಶಿಷ್ಯವೃತ್ತಿಯನ್ನು ಮಾಡದ ಬಗೆ ಗುರುಡರಿಗೆ ಹೇಗೆ ಲಭಿಸುವುದು?

ಕವಿಗಳು ಗುರುಗಳಾಗಿ ನಮಗೆ ಉಪಕಾರ ಮಾಡುವುದು ಇಷ್ಟೇ ಅಲ್ಲ. ಕವಿಗಳು ಚಕ್ಷುರಾದೀಂದ್ರಿಯಗಳಿಗೆ ಗೋಚರವಾಗದ ಅನೇಕ ನವೀನ ಸೃಷ್ಟಿಗಳನ್ನು ಮಾಡಿಯೂ, ಅನೇಕ ವಿಶೇಷ ವಿಷಯಗಳನ್ನು ಬೋಧಿಸಿಯೂ, ವಿಶೇಷಾನುಭವಗಳನ್ನು ಮಾಡಿಸಿಯೂ ಮುಕ್ತರ ಆನಂದವನ್ನು ಈ ಲೋಕದಲ್ಲಿಯೇ ಉಂಟು ಮಾಡಿಸುವರು. ಅವರ ಈ ಸಾಮರ್ಥ್ಯವನ್ನು ಒಬ್ಬ ಕವಿಯು “ಬಿಚ್ಚಳಿಸಲ್ಕೆ ನಾಲಗೆಗಳೈದವು” ಎಂದು ಹೇಳುತ್ತಾನೆ. ಕವಿಗಳು ಸ್ವರ್ಗಾದಿ ಭೋಗಭೂಮಿಗಳನ್ನೂ ಋಷಿಗಳ ಋಷ್ಯಾಶ್ರಮಗಳನ್ನೂ ವರ್ಣನೆ ಮಾಡಿರುವರು. ಅವನ್ನು ಓದಿನೋಡಿರಿ. ಕಾದಂಬರಿಯ ಆಸ್ಥಾನ ವರ್ಣನೆಯನ್ನು ಓದಿನೋಡಿರಿ. ಮೂರ್ ಎಂಬ ಆಂಗ್ಲ ಕವಿಯು (Eutopia) “ಯೂಟೋಪಿಯ” ಎಂಬ ಗ್ರಂಥವನ್ನು ಓದಿರಿ. ಆಗ ಲ್ಲವೆ ನಿಮಗೆ ಒಬ್ಬ ಕವಿಯು ಕವಿಗಳ ನವೀನ ಸೃಷ್ಟಿಯ ವಿಷಯವಾಗಿ ಹೇಳಿದ ಅಭಿಪ್ರಾಯವು ತಿಳಿದು ಬರುವುದು.

“ಬಗೆದುದನೊಗೆದಂತೆ ಮಗು।
ಳ್ದೊಗೆಯಿಸುಗುಂ ಪೆರತನೊಂದನೊಗೆಯಿಸವಜನುಂ॥
ವಿಗಡರ್ಕಬ್ಬಿಗರವನಿಂ।
ದೊಗೆಯಿಸುವರ್ ಬಗೆಗೆ ಬಂದುದೆಲ್ಲಮನವಮಾ!॥”

ಇಲ್ಲಿ ಕವಿಗಳು ತಮಗೆ ಇಷ್ಟ ಬಂದ ವಿಷಯಗಳನ್ನು ಆ ಬ್ರಹ್ಮನಿಂದಲೇ ಸೃಷ್ಟಿಸುವರು, ಎಂದು ಹೇಳಿರುವನು. ಮತ್ತೊಬ್ಬ ಕವಿಯು—

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮವಕ್ತ್ರಮಂ।
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರವಂ ವರನಿಕ್ಕಿ ಗಂಟಲಂ॥
ಮೆಟ್ಟುಗೆ ಮೆಟ್ಟದಿರ್ಕೆ——ಯಾರು ಕಂಡವರು?

ನಾವೆಲ್ಲರೂ ಆ ಸಂದರ್ಭಗಳನ್ನು ನಿಜವೆಂದು ನಂಬಿಲ್ಲವೆ? ಕಾರಣವೇನು? ಎಂದು ಮನ್ನನ್ನು ಕುರಿತು ಪ್ರಶ್ನೆ ಕೇಳಿ ಪುನಃ ಅವನೇ—

"—ಕವಿಗಳ್ ಕೃತಿಬಂಧದೊಳತ್ತೆ ಕಟ್ಟಿದರ್ ।
ಮುಟ್ಟಿದರಿಕ್ಕಿ ಮೆಟ್ಟಿದರ್,,——ಎಂದ ಮೇಲೆ
'—ಏವಳವಗ್ಗಳಮೋಕವೀಂದ್ರರಾ' । ಎಂದು ಹೇಳಿ ನಮ್ಮನ್ನು
ಒಪ್ಪಿಸುವನು.

ಇದೂ ಹಾಗಿರಲಿ; ಲೋಕದಲ್ಲಿ ಸಮಸ್ತ ವಸ್ತುಗಳೂ ಕಾಲಚಕ್ರಕ್ಕೆ ಸಿಕ್ಕಿದೊಳಾಗಿ ನಾಶಹೊಂದುವುವು. ಯಾವುದೂ ಕಾಲಕ್ಕೆ ಎದುರಿಲ್ಲ. ಎಂಥ ಸ್ಪೃಹಣೀಯವಾದ ಮಹಿಮಾಧಾಯಕವಾದ ವಸ್ತುಗಳು ಹುಟ್ಟಲ್ಲಿಲ್ಲ? ನಾಶಹೊಂದಲಿಲ್ಲ? ಹುಟ್ಟುತ್ತಲೂ ಇರುವುವು. ನಾಶಹೊಂದುತ್ತಲೂ ಇರುವುವು. ರಾಮರಾಜ್ಯದಂತಹ ರಾಜ್ಯವೂ ಮಾಯವಾಯಿತು! ವ್ಯಾಸಾದಿ ಮಹರ್ಷಿಗಳೂ ಕಾಲವಾದರು! ಸೂರ್ಯಚಂದ್ರಾದಿಗಳೂ ಪ್ರಳಯದಲ್ಲಿ ನಾಶಹೊಂದುವರು. ಕಾಲನ ಧಾಳಿಯನ್ನು ಯಾರು ತಡೆದು ನಿಲ್ಲಿಸುವರು? ಅಂತಹ ಕಾಲರಾಜನನ್ನು ತಡೆದು, "ನಿಲ್ಲು, ನಿನ್ನ ದಾಳಿಯನ್ನು ನಮ್ಮಮೇಲೆ ನೂಕು; ನಿನ್ನಿಂದೇನಾದೀತು? ನಿನ್ನ ದಾಳಿಯು ನಮ್ಮನ್ನು ಸುತ್ತಲೂ ಮುತ್ತಲಿ; ನಾವು ಹೆದರುವರಲ್ಲ;" ಎಂದು ಎದೆ ತಟ್ಟಿಕೊಂಡು ಹೇಳುವ ಸಾಮರ್ಥ್ಯವುಳ್ಳವರು ಯಾರಾದರೂ ನಮ್ಮ ಮಧ್ಯದಲ್ಲಿ ಹುಟ್ಟಿರುವರೇ ಸ್ವಲ್ಪ ಯೋಚಿಸಿರಿ. ಲೋಕಕ್ಕೆ ಅಸದೃಶವಾದ ಉಪಕಾರವನ್ನು ಮಾಡಲು ಕಾಲವನ್ನು ಎದುರಿಸಿದವರು ಕವಿಗಳೇ ಎಂದು ಹೇಳುತ್ತೀರಿ. ಕವಿಗಳು—"ತಮ್ಮ ಪಾರ್ಥಿವಶರೀರವನ್ನಲ್ಲವೆ ಕಾಲನು ಅಗಿದು ನುಂಗುವನು; ಅವನ ಹಲ್ಲಿಗೆ ಸಮಯದ ಅವನ ಸಾಮರ್ಥ್ಯವು ಸ್ವಲ್ಪವೂ ನಡೆಯದ ಬೇರೊಂದು ಶರೀರವನ್ನು ವಹಿಸಿದರೆ ಅವನಿಂದೇನಾದೀತು?" ಎಂದು ವಾಙ್ಮಯ ಶರೀರವನ್ನು ಧರಿಸಿ ಉಪಕಾರ ಮಾಡಲು ಹೊರಟರು. ಆಗ ಅವರ ಕೌಶಲ್ಯವು ಸರ್ವತ್ರ ಸರ್ವಕಾಲದಲ್ಲಿಯೂ ಬೆಳಗುವಂತಾಯಿತು. ಈ ವಿಚಾರವನ್ನು ಒಬ್ಬ ಕವಿಯು ಹೀಗೆ ಪ್ರಸ್ತಾಪಿಸಿರುವನು.—

"ಅದುವಿದುವೆನ್ನದಾವುದು ಮನೋರ್ಮೆಯೆಮಂಗುವ ಕಾಲರಾಕ್ಷಸಂ ।
ಗದಿರದೆ ತಮ್ಮ ವಾಙ್ಮಯಶರೀರದೆ ನಿಂದು ಸಮಸ್ತಲೋಕಕಂ ॥
ಪಡೆದು ಹಿತಾಹಿತಂಗಳಿರವಂ ತಿಳಿವಂತಿರೆ ಪೇಳ್ದು ಕಲ್ಪಿಪಾ ।
ಸದಮಳಚಿತ್ತರಪ್ಪ ಕವಿವರ್ಯರೆ ವಂದ್ಯರಿಳಾತಳಾಗ್ರದೊಳ್ ॥

ಎಂದು. ಎಷ್ಟು ಕಟ್ಟಡಗಳು ನಾಶವಾಗಲಿಲ್ಲ? ಎಷ್ಟು ರಾಜ್ಯಗಳು ಹೀನಸ್ಥಿತಿಗೆ ಬರಲಿಲ್ಲ? ಎಷ್ಟು ಮಹೋಪಕಾರಿಗಳು ನಿರ್ನಾಮವಾಗಲಿಲ್ಲ? ಅವನ್ನು ಹೇಳು

ವವರೂ ಇಲ್ಲ; ಕೇಳುವವರೂ ಇಲ್ಲ; ಕವಿಗಳು ತಮ್ಮ ಕಾವ್ಯದಲ್ಲಿ ವರ್ಣಿಸಿದ ಒಂದು ಹಳೇಕಾಲದ ಗುಡಿಸಲೂ, ಒಬ್ಬ ಕುರುಬನ ಇಲ್ಲವೆ ಒಬ್ಬ ಗೊಲ್ಲನ ಕಥೆಯೂ ಈಗಲೂ ಜನಗಳಿಂದ ಭಕ್ತಿಯಿಂದಲೂ ಗೌರವದಿಂದಲೂ ಆದರಿಸಲ್ಪಡುವುದೆಂದು ಹೇಳಿದ ಮೇಲೆ.

ಮತಪೂರ್ವ ರಾಜಕೀರ್ತಿ ।
ಪ್ರತಿಬಿಂಬಂ ಶಬ್ದಮುಕುರದೊಳ್ ॥
ಕ್ಷಿತಿಪಾಲರಳಿದೊಡೇಂ ಕಿಡ ।
ದತಿಶಯದಿಂ ಕೀರ್ತಿಬಿಂಬಮಾಕಲ್ಪಾಂತಂ ॥

ಎಂದು ಕವಿಗಳ ವಿಷಯದಲ್ಲಿ ಹೇಳುವುದೊಂದತಿಶಯವಲ್ಲ. ಕ್ಷಣಿಕವಾದದ್ದನ್ನು ಚಿರಸ್ಥಾಯಿಯನ್ನಾಗಿಯೂ, ಕ್ಷುದ್ರವಾದದ್ದನ್ನು ಅತಿಶಯವಾದದ್ದನ್ನಾಗಿಯೂ, ಮತ್ತೇನು? ಎಂಥೆಂಥದ್ದನ್ನು ಎಂಥೆಂಥದ್ದನ್ನಾಗಿಯೂ ಮಾಡುವ ಅಸ್ವಾದೃಶವಾದ ಮಹಿಮೆಯು ಕವಿಗಳಿಗಲ್ಲದೆ ಮತ್ತಾರಿಗುಂಟು ?

ಇದೂ ಹಾಗಿರಲಿ; ಶ್ರೀಕೃಷ್ಣನು ಅರ್ಜುನನಿಗೆ ದಿವ್ಯ ಚಕ್ಷುಸ್ಸನ್ನು ಕೊಟ್ಟು ವಿಶ್ವರೂಪವನ್ನು ತೋರಿಸಿದಂತೆ ಕವಿಗಳು ತಮ್ಮನ್ನು ಆಶ್ರಯಿಸಿದವರಿಗೆ ಒಂದು ಮಾನಸ ಚಕ್ಷುಸ್ಸನ್ನು ಕೊಟ್ಟು ವಿಶ್ವದ ಮಹಿಮೆಯನ್ನು ತೋರಿಸುವರು. ಅದರ ದರ್ಶನವನ್ನು ಮಾಡಿ ದುಃಖ ಮಿಶ್ರವಿಲ್ಲದ ಆನಂದವನ್ನು ಅನುಭವಿಸುವರು. ಆ ಆನಂದಾನುಭವದಲ್ಲಿ ತಮ್ಮ ದುಃಖವನ್ನೂ ಮರೆಯುವರು. ಸೆರೆಮನೆಯ ಕ್ಲೇಶವನ್ನೂ ಗ್ರಂಥರಚನೆಯಲ್ಲಿ ಸುಖವೆಂದು ಭಾವಿಸುವುದುಂಟು. ಪತ್ನಿ, ಪುತ್ರ, ತಂದೆ, ಸ್ನೇಹಿತ ಮುಂತಾದವರ ಮರಣದಿಂದ ಸಂಭವಿಸಿದ ದುಃಖವನ್ನು ರಾಮಾಯಣ ಮಹಾಭಾರತಾದಿ ಗ್ರಂಥಗಳ ಪಠನ ಮಾಡುತ್ತ ಸಹಿಸಿಕೊಂಡು ಇದ್ದವರನ್ನೂ ನಾವು ನೋಡುತ್ತೇವೆ.

ಕವಿಗಳು ಉಪಕರಿಸುವ ರೀತಿಯು ವಿಜಾತೀಯವಾಗಿರುವುದು. ಅವರು ತಾವು ಉಪಕಾರ ಮಾಡುವವರೆಂದು ಉಪಕರಿಸುವ ವೇಳೆಯಲ್ಲಿ ತೋರಿಸಿಕೊಳ್ಳುವುದಿಲ್ಲ. "ಸ್ವಾರ್ಥಾನ್ಪರಿತ್ಯಜ್ಯಪದಾರ್ಥಘಟಕರು" ಲೋಕದಲ್ಲನೇಕರಿರುವರು. ಅವರೂ ತಮ್ಮ ಪುರುಷಕಾರವನ್ನು ಆ ಕಾಲದಲ್ಲಿ ತೋರಿಸಿಕೊಳ್ಳದೆ ಇರಲಾರರು. ಕವಿಗಳಾದರೋ ಹಾಗಲ್ಲ. ಅವರು ವಾಗ್ರೂಪದಲ್ಲಿ ನಿಂತು ಉಪಕರಿಸುವಾಗ ಉಪಕೃತರಾಗುವ ನಾವು ನಾವೇ ಶ್ರಮಪಟ್ಟು ಆ ಫಲವನ್ನು ಹೊಂದಿದೆವೆಂದು

ತಿಳಿಯುವೆವೇ ಹೊರತು ತಮಗಾಗಿ ಕವಿಗಳು ಮಾಡಿದ ಉಪಕಾರವೆಂದು ನೆನೆಯೆವು. ದಾರಿಕಾಯುವ ಕಳ್ಳರಂತೆ ಅವರ ಸರ್ವಸ್ವವನ್ನೂ ನಾವು ಅಪಹರಿಸಿಕೊಂಡು ಹೋಗುವೆವು. ಅವರು ಅಷ್ಟು ಸಂಪತ್ತನ್ನು ಶೇಖರಿಸಲು ಎಷ್ಟು ಕಷ್ಟಪಟ್ಟರು? ಎಂಬುದನ್ನು ಸ್ವಲ್ಪವೂ ಗಣಿಸುವುದಿಲ್ಲ. "ನಮ್ಮ ಲಾಭಕ್ಕೇನೇ ಅವರು ಶೇಖರಿಸಿಟ್ಟ ಸಂಪತ್ತು; ನಾವು ದಾರಿ ಕಾದೆವು; ನಮಗೆ ಆ ಸಂಪತ್ತು ಲಭಿಸಿತು" ಎಂದೇ ತಿಳಯುವೆವು. ನಾವು ಉಪಕೃತರಾಗುವೆವೆಂಬ ಭಾವನೆಯಿಂದ ಕೂಡಿ ಅವರ ಹತ್ತಿರ ಉಪಕಾರ ಬೇಡುವುದಕ್ಕೆ ಹೋಗುವಾಗ ಹದಿನಾರು ಹಲ್ಲುಗಳನ್ನು ಬಿಟ್ಟುಕೊಂಡು ಮಾರುದ್ದದ ದೇಹವನ್ನು ಚೋಟುದ್ದ ಮಾಡಿಕೊಂಡು ದೈನ್ಯದಿಂದ ದೇಹಿ ಎಂದು ಹೇಳಬೇಕಾಗಿಲ್ಲ. ಯಾವಾಗ ದರ್ಶನಲಭಿಸೀತೋ ಎಂದು ಸಮಯ ನಿರೀಕ್ಷಿಸಬೇಕಾಗಿಲ್ಲ. ಉಪಕರಿಸುವರೋ ಇಲ್ಲವೋ ಎಂದು ಸಂಶಯ ಪಡಬೇಕಾಗಿಲ್ಲ. ಅವರಾದರೋ, "ಉಪಕಾರ ಬೇಡಲು ಯಾರಾದರೂ ಬರುವರುಂಟೇ? ಯಾರು ಬರುವರು? ಯಾವಾಗ ಬರುವರು? ಎಂದು ನಮ್ಮ ಸಮಯವನ್ನೂ ಅನುಗ್ರಹವನ್ನೂ ಹಾರೈಸುತ್ತಲೂ "ಯಾವನಾದರೂ ಒಬ್ಬನು ಉಪಕೃತನಾಗಿ ಯೋಗ್ಯನಾದರೆ ತಾವು ಧನ್ಯರು ತಮ್ಮ ಜನ್ಮವು ಸಾರ್ಥಕವಾಯಿತು" ಎಂದು ಸಂತೋಷಪಡುವರು. ಇಂಥ ಸರಳ ಹೃದಯರಾದ ಮಹೋಪಕಾರಿಗಳುಂಟೇ? ಇವರ ಉಪಕಾರದ ಸರಳತೆಯನ್ನೂ ನೋಡಿ ಆಬಾಲವೃದ್ಧರೂ ಇವರ ಸಹವಾಸವನ್ನು ಸದಾ ಹಾರೈಸುವರು. ಇವರ ಸಹವಾಸವೊಂದೇನೆ ಎಂಥೆಂಥ ಅತಿಶಯವಾದ ಗುಣಗಳನ್ನು ಹುಟ್ಟಿಸುವುದಿಲ್ಲ? ಕುರೂಪಿಯಾಗಿದ್ದರೂ ಇವರ ಸಹವಾಸ ಮಾಡಿದವನು ರೂಪವಂತನಿಗಿಂತಲೂ ಅತ್ಯಧಿಕವಾಗಿ ಜನರಿಂದ ನೋಡಲ್ಪಡುವನು. ದುರ್ಗುಣಿಯಾದವನು ತನ್ನ ದುರ್ಗುಣಗಳನ್ನು ಕಷ್ಟಪಡದೆ ಸರಾಗವಾಗಿ ಕಳೆದುಕೊಳ್ಳುವನು. "ವಿದ್ಯಾವಿಹೀನಃ ಪಶುಃ" ಎಂಬ ಮರ್ಯಾದೆಯಲ್ಲಿ ತನ್ನಲ್ಲಿದ್ದ ಪಶುತ್ವವನ್ನು ಹೋಗಲಾಡಿಸಿಕೊಂಡು ದೇವಭಾವವನ್ನು ಹೊಂದಲು ಯತ್ನಿಸುವನು. ಹಾಗೆ ಯತ್ನಿಸಿ ದೇವನೇ ಆಗುವನು. ಸುಗುಣಾದಿಗಳು ಹುಟ್ಟಿದ ಮೇಲೆಯೇ ಕವಿಗಳ ಉಪಕಾರವು ಅತಿಶಯ ಉಳ್ಳದ್ದೆಂದು ಉಪಕೃತರಾದವರಲ್ಲಿ ಕೃತಜ್ಞತಾಜ್ಞಾನವು ಜನಿಸುವುದು. ಕವಿಗಳು ಇಂದ್ರಜಾಲ ವಿದ್ಯೆಯಲ್ಲಿ ಬಹು ಕುಶಲರಾದರಿಂದ ಪುಸ್ತಕಗಳೆಂಬ ಇಂದ್ರಜಾಲ ದಂಡವನ್ನು ತಿರುಗಿಸಿ ದೃಶ್ಯಗಳಾದ ಲೋಕವಸ್ತುಗಳ ವಿಚಿತ್ರವ್ಯಾಪಾರಗಳು ಕಣ್ಣಿನ ಮುಂದೆ ನಡೆಯುವಂತೆ ತೋರಿಸಿ ಅದನ್ನು ನೋಡುವಕಾಲದಲ್ಲಿ ಹರ್ಷವಿಷಾದಗಳನ್ನು ಅನುಭವಿಸುವಂತೆ ಮಾಡಿ ಪ್ರೇಕ್ಷಕ

ರಾದ ನಮ್ಮಲ್ಲಿ ಪ್ರತಿಯೊಬ್ಬರಲ್ಲಿಯೂ ತಮಗಿಂತ ಹೆಚ್ಚಾಗಿ ತಿಳಿದವರು ಇನ್ನಾರಿರುವ ರೆಂಬ ಅಜ್ಞಾನ ಗರ್ಭವಾದ ಗರ್ವವನ್ನು ನಮಗೂ ತಿಳಿಯದಂತೆ ತೊಲಗಿಸಿ ನಮ ಗೇನೂ ತಿಳಿಯದು ಎಂದು ಭರ್ತೃಹರಿಯು:—

"ಯದಾ ಕಿಂಚಿದ್ ಜ್ಞೋಽಹಂ ಗಜ ಇವ ಮದಾಂಧಸ್ಸಮಭವಂ ।
ತದಾಸರ್ವಜ್ಞೋಽಸ್ಮೀತ್ಯಭವದವಲಿಪ್ತಂ ಮಮ ಮನ: ॥
ಯದಾ ಕಿಂಚಿತ್ಕಿಂಚಿದ್ಬುಧಜನ ಸಕಾಶಾದವಗತಂ ।
ತದಾ ಮೂರ್ಖೋಽಸ್ಮೀತಿಜ್ವರಇವ ಮದೋ ಮೇ ವ್ಯಪಗತಃ ॥

ಎಂದು ಹೇಳುವಂತೆ ಅನುತಾಪವನ್ನು ಹುಟ್ಟಿಸಿ ನಮ್ಮ ನೈಜರೂಪದಲ್ಲಿ ನಮಗೆ ಹೇಸಿಕೆಯನ್ನು ಹುಟ್ಟಿಸುವರು. ಇಂಥ ಅದ್ಭುತತರ ಶಕ್ತಿಯು ಯಾವ ಇತರ ಇಂದ್ರಜಾಲಕನಲ್ಲಿ ಉಂಟು?

ಏವಂಚ ಕವಿಗಳೆಂಬವರು "ಏತೇ ಸತ್ಪುರುಷಾ: ಪರಾರ್ಥ ಘಟಕಾ: ಸ್ವಾರ್ಥಾನ್ಪರಿತ್ಯಜ್ಯಯೇ" ಎಂಬ ಮರ್ಯಾದೆಯಲ್ಲಿ ಪರೋಪಕಾರೈಕದೀಕ್ಷಿತ ರಾದ ಕಲಾವಿದರಲ್ಲಿ ಮಹಾ ನಿಪುಣರೆಂದು ತೋರಿಸಿದಂತಾಯಿತು.

ಇನ್ನು ಮೇಲೆ ರಾಜ್ಯಾಂಗಕ್ಷೇಮಚಿಂತಕರಲ್ಲಿಯೂ ಇವರೇ ಅಗ್ರಗಣ್ಯರೆಂಬುವ ದನ್ನು ವಿವರಿಸುವೆನು. ರಾಜನು ಅವನಿಗೆ ಪ್ರತಿನಿಧಿಗಳಾದ ಮಂತ್ರಿ, ಸೇನಾಪತಿ, ಆರೋಗ್ಯಾಧಿಕಾರಿ, ಧರ್ಮಾಧಿಕಾರಿ, ನೀತಿಶಾಸ್ತ್ರಕಾರಿ, ಇವರ ವ್ಯಾಪಾರವನ್ನು ಚನ್ನಾಗಿ ಕಾರ್ಯಕಾರಣಪುರಸ್ಸರವಾಗಿ ವಿಮರ್ಶಿಸಿ ನಿರೂಪಿಸುವ ಚರಿತ್ರಲೇಖಕ ಮೊದಲಾದವರು, ಇವರ ಕೃತ್ಯದಲ್ಲಿಯೇ ಪ್ರವರ್ತಿಸಿದ ಕವಿಗಳ ಮುಂದೆ ಬಂದರೆ ಸೂರ್ಯನ ಮುಂದೆ ಬಂದ ಮಿಂಬುಳುವಿನಂತಾಗುವರು. ಅವರಸ್ಪರ ಹಿತ ಪ್ರವೃತ್ತಿಯು ಕವಿಗಳ ಪ್ರವೃತ್ತಿಯಷ್ಟು ಕಾರ್ಯಕರವಾಗಿ ಪರಿಣಮಿಸದು. ಅವರ ವ್ಯಾಪಾರವೆಲ್ಲವೂ ಉತ್ಪನ್ನವಾದ ಅನಿಷ್ಟರೂಪ ವ್ಯಾಪಾರವನ್ನು ತಡೆಯುವದ ರಲ್ಲಿಯೇ ಪರ್ಯವಸಾನ ಹೊಂದುವುವು. ಅನಿಷ್ಟನಿವೃತ್ತಿಯಾದ ಮಾತ್ರಕ್ಕೆ ಇಷ್ಟ ಪ್ರಾಪ್ತಿಯು ಉಂಟಾದರೂ ಆಗಬಹುದು. ಇಲ್ಲದಿದ್ದರೆ ಇಲ್ಲ. ರಾಜನು "ಹೀಗೆ ಮಾಡು ಹೀಗೆ ಮಾಡದಿದ್ದರೆ ಈ ರೀತಿ ಶಿಕ್ಷಿಸುವೆನು" ಎಂದು ಆಜ್ಞೆ ಮಾಡು ವನು. ಆಜ್ಞೋಲ್ಲಂಘನೆ ಮಾಡಿದವರನ್ನು ಕಂಡುಹಿಡಿದು ಶಿಕ್ಷೆಗೆ ಗುರಿ ಮಾಡುವನು. ಕಳ್ಳನನ್ನು ಇತರರ ವಸ್ತುವನ್ನು ಕದಿಯದಿರುವಂತೆ ಸೆರೆಯಲ್ಲಿ ಡುವನು. ಕೊಲೆಪಾತಕರನ್ನು ಅವರಿಂದ ಮುಂದಕ್ಕೆ ಕೊಲೆಗಳು ನಡೆಯದೆ ಇರುವು

ದಕ್ಕೆ ಅವರಿಗೆ ಉಂಟಾದ ಶಿಕ್ಷೆಯನ್ನು ನೋಡಿ ಇತರರು ಕೊಲೆಗೆಲಸದಲ್ಲಿ ಪ್ರವರ್ತಿಸದಂತೆ ಭೀತಿ ಹುಟ್ಟಿಸುವುದಕ್ಕಾಗಿಯೂ ಕೊಲ್ಲುವನು. ಮಂತ್ರಿಯು ರಾಜನ ಬುದ್ಧಿಯ ಸ್ಥಾನದಲ್ಲಿ ನಿಂತು ರಾಷ್ಟ್ರಚಕ್ರವನ್ನು ನಿರ್ವಹಿಸುವನು. ದಂಡನಾಯಕನು ಜನಾಂಗದಲ್ಲಿ ಕಾಮಕ್ರೋಧಾದಿಗಳಿಂದ ಹುಟ್ಟುವ ಜನಕ್ಷೋಭವನ್ನು ತನ್ಮೂಲಕ ಹುಟ್ಟುವ ದೇಶಕ್ಷೋಭವನ್ನು ನಿವಾರಿಸುವುದಲ್ಲದೆ ದುಷ್ಟರಾದ ಪರರಾಜರ ಹಾವಳಿಯಿಂದ ಉತ್ಪನ್ನವಾಗುವ ದೇಶಸಂಕಟವನ್ನೂ ನಿವಾರಿಸುವನು. ಅಧಿಕಾರಿಗಳು ಜನಗಳಲ್ಲಿ ಹಾವಳಿಯು ಹುಟ್ಟದಂತೆ ನೋಡಿಕೊಳ್ಳುವರು ಆರೋಗ್ಯಾಧಿಕಾರಿಗಳು ರಾಜನಿಂದ ಸ್ಥಾಪಿತವಾದ ವೈದ್ಯಶಾಲೆಗಳಲ್ಲಿ ಹುಟ್ಟಿದ ರೋಗಕ್ಕೆ ಚಿಕಿತ್ಸೆ ಮಾಡುವರು. ಇತರ ಕ್ಷೇಮಚಿಂತಕರ ಕಾರ್ಯವು ಪ್ರಾಯಶಃ ಇವರ ಕಾರ್ಯದಂತೆ, ಉತ್ಪನ್ನವಾದ ಅನಿಷ್ಟನಿವೃತ್ತಿಯಲ್ಲಿಯೇ ಇರುವುದು. ರಾಜನು ಮೊದಲಾಗಿ ಈ ಕ್ಷೇಮಚಿಂತಕರ ವ್ಯಾಪಾರಗಳೆಲ್ಲವೂ ಪ್ರಜೆಯೆಂಬ ಭೂಮಿಯಲ್ಲಿ ಹುಟ್ಟಿದ ವಿಷವೃಕ್ಷದ ಬೆಳವಣಿಗೆಯನ್ನು ಕತ್ತರಿಸಿ ತಡೆಯುವಂತೆ ಇರುವುವು. ಕವಿಗಳ ಪ್ರವೃತ್ತಿಯಾದರೂ ಹಾಗಲ್ಲ. ಅಂಥ ವಿಷವೃಕ್ಷದ ಬೀಜವೇ ನೆಲದಲ್ಲಿರುತಾಗಲೇ ಮುಗಿಹೋಗಿ ಮೊಳಕೆ ಬಿಡದಂತೆ ಮಾಡುವುದು, ಇಷ್ಟೇ ಅಲ್ಲ ಆ ನೆಲವನ್ನು ಚೆನ್ನಾಗಿ ಅಗತೆ ಮಾಡಿ ಒಳ್ಳೆಯ ಪಾತಿಯನ್ನು ಕಟ್ಟಿ ಆ ಪಾತಿಯೊಳಗೆ ಸುವೃಕ್ಷವು ಹುಟ್ಟುವ ಬೀಜವನ್ನು ನೆಟ್ಟು ಗಿಡ ಬೆಳೆಸುವರು. ಕವಿಗಳು ನಮ್ಮ ಮನವೆಂಬ ನೆಲದಲ್ಲಿ ಕಥೆಯೆಂಬ ಪಾತೆಗಳನ್ನು ಕಟ್ಟಿ ಮಹಾತ್ಮರ ಚರಿತ್ರ ಬೀಜಗಳನ್ನು ನೆಡುವರು. ಆ ಬೀಜದಿಂದ ಬೆಳೆದ ವೃಕ್ಷದಲ್ಲಿ ಫಲರೂಪವಾದ ಅವರ ಮೇಲ್ಮೆಗಳನ್ನೂ ಲೋಕೋಪಕಾರಗಳನ್ನೂ ಆಸ್ವಾದಿಸಿ "ತಾವೂ ಅಂಥ ಫಲವೃಕ್ಷಗಳಾಗಿ ಇತರರಿಗೆ ಫಲಕೊಡುವವರಾಗಬೇಕು" ಎಂಬ ಆತ್ಯಾಶೆಯನ್ನೂ ಉತ್ಸಾಹವನ್ನೂ ಹುಟ್ಟಿಸುವರು. ಇದೂ ಅಲ್ಲದೆ ಕವಿಗಳು ವಿಷವೃಕ್ಷದಲ್ಲಿ ಹುಟ್ಟುವ ವಿಷಫಲಗಳನ್ನೂ, ಅವನ್ನು ತಿಂದು ಕಷ್ಟದಲ್ಲಿ ನರಳಿದ ಜನರ ಹೀನಸ್ಥಿತಿಯನ್ನೂ, ಒಳ್ಳೇ ಬೀಜದಿಂದ ಹುಟ್ಟಿದ ಕಲ್ಪವೃಕ್ಷದ ಅಮೃತೋಪಮಾನವಾದ ಫಲವನ್ನೂ, ಅದನ್ನು ತಿಂದು ಸುಖದಲ್ಲಿ ಓಲಾಡುವ ಜನಗಳ ಮೇಲ್ಮೆಯನ್ನೂ ಪಕ್ಕಪಕ್ಕದಲ್ಲಿ ಇಟ್ಟು ತೋರಿಸುವುದರಿಂದ ಬಾಲಕರ ಮನಸ್ಸು ಒಳ್ಳೇ ಬೀಜದ ಬೆಳವಣಿಗೆಗೆ ಅವಕಾಶ ಕೊಡುವುದೇ ಹೊರತು ವಿಷಬೀಜಗಳು ಬೇರೂರುವುದಕ್ಕೆ ಅವಕಾಶ ಕೊಡದು. ಇದರ ಮೇಲೆ ಉತ್ತಮೋತ್ತಮ ಸ್ಥಿತಿಗೆ ಏರಿದವರ ಮಹತ್ವವನ್ನೂ, ಅವರು ಹೇಗೆ ಏರಿದರೋ ಅದನ್ನೂ ಮುಂದಿಟ್ಟು ಮಾಡಿಸಿಕೊಟ್ಟು, ಮನೆಯನ್ನೂ ಕೊಟ್ಟು ಮಕ್ಕಳ ಕೈಬಳಹವನ್ನೂ ತಿದ್ದಿಸುವಂತೆ ನಮ್ಮ ನಡತೆಗಳನ್ನು ತಿದ್ದಿಸುವರು. ರಾಜನಂತೆಯೂ ಮಂತ್ರಿಯಂತೆಯೂ ಅಧಿಕಾರಿಗಳಂತೆಯೂ ಕವಿಗಳು ಆಜ್ಞೆ ಮಾಡುತ್ತ ಹತ್ತರ ಬರುವರಲ್ಲ, ಪತ್ನಿಯಂತೆಯೂ, ಸ್ನೇಹಿತನಂತೆಯೂ, ಅಣ್ಣತಮ್ಮಂದಿರಂತೆಯೂ ಹತ್ತಿರ ಬಂದು

ನಾವು ನಾವೇ ಇಷ್ಟಪಟ್ಟು ಕೆಲಸ ಮಾಡುವಂತೆ ಮಾಡುವರು. ಕವಿಗಳ ಮಾತು ಕರ್ಕಶವಾಗಿಲ್ಲ. ದ್ರಾಕ್ಷೆಯಂತೆ ರುಚಿಯಾಗಿರುವುದು. ಯಾವ ಯಾವ ಪ್ರಕೃತಿಯುಳ್ಳ ಜನರನ್ನು ಹೇಗೆ ವಶಮಾಡಿಕೊಳ್ಳಬೇಕೆಂಬುದನ್ನು ಅವರು ಬಲ್ಲರು. ಔಷಧವನ್ನು ಸಕ್ಕರೆಯೊಳಗಿಟ್ಟು ಮಕ್ಕಳಿಗೆ ಕೊಡುವಂತೆ ದುರ್ಗುಣ ನಿವಾರಣೆ ಮಾಡಲು ಔಷಧಿಕೊಡಲು ಬಂದವರೆಂದು ನಾವು ಅವರ ಹತ್ತಿರ ಹೋಗುವಾಗ ಗೊತ್ತಾಗುವುದಿಲ್ಲ. ಹೇಳಬೇಕೆಂಬ ವಿಷಯವನ್ನು ತಿಳಿಯಿತು, ತಿಳಿಯಲಿಲ್ಲ, ಎಂಬ ರೀತಿಯಲ್ಲಿ ಮರೆಮಾಚಿ ಹೇಳುತ್ತ ಹೇಳುತ್ತ ಹೋಗಿ ತಿಳಿದುಕೊಂಡಲ್ಲದೆ ಆಗದೆಂಬ ಉತ್ಕಟೇಚ್ಛೆ ನಮ್ಮಲ್ಲಿ ಕಾಣುತ್ತಲೆ ತಿಳಿಸುವರು. ತಾವು ತಿಳಿಸುವ ವಿಷಯದಲ್ಲಿ ಪಾಠಕರುಗಳಿಗೆ ಅನುಭಾವಾದಿಗಳನ್ನು ಹುಟ್ಟಿಸಿ ಅವರ ಅಂತರಂಗದಲ್ಲಿ ತಮ್ಮ ಉದ್ದೇಶವು ದೃಢಮೂಲವಾಗಿ ಫಲಕಾರಿಯಾಗುವಂತೆ ಮಾಡುವರು. ಒಳ್ಳೆಯ ಮಾತಿಗೆ ವಶವಾಗದವನು ಅಜ್ಞೆಗೆ ವಶವಾಗುವನು. ಅಜ್ಞೆಗೆ ವಶವಾಗದವನು ಹೆದರಿಕೆಗೆ ವಶವಾಗುವನು. ಇವಿಷ್ಟಕ್ಕೂ ವಶವಾಗದವನು ಇಷ್ಟವಾಗಿರುವುದನ್ನು ಕೊಡುವುದರಿಂದ ವಶವಾಗುವನು. ಈ ನೀತಿಯನ್ನು ಚನ್ನಾಗಿ ಬಲ್ಲ ಕವಿಗಳು ಸಮಯಕ್ಕೆ ತಕ್ಕಂತೆ ಬೋಧಿಸಿ, ಮಾಡಿ, ಕೊಟ್ಟು ತಮ್ಮ ಮಾರ್ಗಕ್ಕೆ ತಂದುಕೊಳ್ಳುವರು. "ಸತ್ಯಂ ವದ, ಧರ್ಮಂ ಚರ" ಎನ್ನುವ ಹಾಗೆ ಶಾಸ್ತ್ರಕಾರರ ಶಾಸನವಿರುವುದು. "ಅಸತ್ಯಕ್ಕೆ ಒಳಗಾದರೆ, ಅಧರ್ಮದಲ್ಲಿ ಚರಿಸಿದರೆ ಸೆರೆಯಲ್ಲಿಡುವೆನು; ಶೂಲವನ್ನು ಏರಿಸುವೆನು;" ಎಂಬಂತೆ ರಾಜಾಜ್ಞೆಯು ಇರುವುದು. ಕವಿಗಳು ಜನಗಳನ್ನು. ಧರ್ಮಮಾರ್ಗದಲ್ಲಿ ನಡೆಯಿಸಬೇಕೆಂಬ ಉದ್ದೇಶದಲ್ಲಿಯೇ ಹೊರಟರೂ ಅವರ ಶಿಕ್ಷಾಕ್ರಮದಲ್ಲಿ "ನಮ್ಮನ್ನು ಇವರು ಶಿಕ್ಷಿಸುವುದಕ್ಕೆ ಬಂದಿರುವರು; ನಮ್ಮ ಸ್ವೈರಾಚಾರವನ್ನು ನಿರೋಧಿಸುವರು;" ಎಂಬ ಭಾವವೇ ಹುಟ್ಟುವುದಿಲ್ಲ. ಸಂತೋಷದೊಡನೆ ಇವರ ಹಿಂದೆ ಹೋಗಿ ಸಂಸ್ಕೃತರಾಗಲು ಸಮ್ಮತಿಸುವೆವು. ಇಷ್ಟವಿದ್ದ ಕಡೆ ಕಾರ್ಯವು ಕಷ್ಟವಿಲ್ಲದೆ ನೆರವೇರುವುದಾದ್ದರಿಂದ ಕವಿಗಳ ಪ್ರವೃತ್ತಿಯು ಹಿಂದೆ ನಿರೂಪಿಸಿದಂತೆ ಅವರ ವಾಕ್ಯವನ್ನು ಕೇಳುವವರಲ್ಲಿ ನಾವು ಎಂಬ ಭಾವವೇ ಮಾಯವಾಗುವುದರಿಂದ ಎಂದೂ ನಿಷ್ಫಲವಾಗುವುದಿಲ್ಲ. ಕವಿಗಳ ಕಾರ್ಯ ಸಾಧನಾಕ್ರಮವು ಅಷ್ಟು ಮನೋಹರವಾದುದು! ಕವಿಗಳ ಶಕ್ತಿಯನ್ನು ಸ್ವಲ್ಪ ಯೋಚಿಸಿ ನೋಡಿರಿ. ರಾಜನೇ ಮೊದಲಾದ ಲೋಕಹಿತೈಷಿಗಳು ಎಷ್ಟು ಶ್ರಮ ತೆಗೆದುಕೊಂಡರೂ ಕವಿಗಳಂತೆ ಹರಿಶ್ಚಂದ್ರನೊಡನೆ ಬಾಲಕರನ್ನು ಬೇಟೆಗೆ ಹೋಗುವಂತೆ ಉತ್ಸಾಹಗೊಳಿಸಬಲ್ಲರೆ? ಆತನ ಪತ್ನೀಪುತ್ರರ ಕಷ್ಟದಲ್ಲಿ ಕೊರಗಿಸಬಲ್ಲರೆ? ಕಾಶೀಪಟ್ಟಣದಲ್ಲಿ ಕ್ರೂರಿಯಾದ ಕಾಲಕೌಶಿಕನು ರೋಹಿತಾಶ್ವನನ್ನು ದರದರನೆ ಎಳೆದೂ, ಹರಿಶ್ಚಂದ್ರನನ್ನು ತ್ಯಜಿಸಲಾರದೆ ಸ್ವಲ್ಪ ತಾಮಸಮಾಡಿದ ಚಂದ್ರಮತಿಯನ್ನು ನಡೆಯೆಂದು ಗದ್ದರಿಸಿಕೊಂಡಾಗ ಆಕೆಯ ದೈನ್ಯವನ್ನೂ, ರೋಹಿತಾಶ್ವನ ರೋದನವನ್ನೂ

ಕೇಳಿ ಹರಿಶ್ಚಂದ್ರನ ಎದೆಯು ಹೇಗೆ ತಲ್ಲಣಿಸಿ ಹೋಯಿತೋ ಹಾಗೆ ಬಾಲಕರ ಎದೆಯನ್ನು ತಲ್ಲಣಿಸಬಲ್ಲರೆ? "ವಿಶ್ವಾಮಿತ್ರನು ಏನೇನು ಕಷ್ಟಗಳನ್ನು ಕೊಡುವನೋ ನೋಡುವೆನು; ಸತ್ಯವನ್ನೂ ಧರ್ಮವನ್ನೂ ಕಾಪಾಡಲಾರದೆ ಹೋದೇನೇ?" ಎಂಬ ಹರಿಶ್ಚಂದ್ರನ ಕೆಚ್ಚನ್ನು ಬಾಲಕರಲ್ಲಿ ಹುಟ್ಟಿಸಬಲ್ಲರೆ? ಕೊನೆಗೆ ಚಂದ್ರಮತಿಯು ಸತ್ತ ಮಗನನ್ನು ಮಸಣಗಾಡಿನಲ್ಲಿ ಹಾಕಿಕೊಂಡು ಭೂತಗಳಿಗೂ ಕೂಡ ಎದೆ ಕರಗುವಂತೆ ರೋದನ ಮಾಡುತ್ತ ಕಣ್ಣೀರನ್ನು ಧಾರಿಧಾರೆಯಾಗಿ ಸುರಿಸುತ್ತ ತನ್ನ ಪೂರ್ವ ಸ್ಥಿತಿಯನ್ನು ನೆನೆಸಿಕೊಂಡು ಹಂಬಲಿಸುತ್ತಾ "ಮಸಣದ ಕಾವಲವನು ನೆಲಹಾಗವನ್ನು ಕೇಳಿದರೆ ಎಲ್ಲಿಂದ ಕೊಡಲಿ, ಯಾರಲ್ಲಿ ಬೇಡಲಿ, ಅಯ್ಯೋ ಹರಿಶ್ಚಂದ್ರನೇ" ಎಂದು ಪ್ರಳಾಪಿಸುತ್ತಿರುವುದನ್ನು ಕೇಳಿ ಹರಿಶ್ಚಂದ್ರನು ಅವಳಿಂದ ನೆಲಹಾಗವನ್ನು ತೆಗೆದುಕೊಂಡು ತನ್ನ ಕರ್ತವ್ಯವನ್ನು ಕಾಪಾಡುವನೋ ಇಲ್ಲವೆ ವಿಶ್ವಾಮಿತ್ರನ ಮಾಯೆಗೆ ಸಿಕ್ಕಿ ತನ್ನ ಸತ್ವಯನ್ನು ಕಳೆದುಕೊಳ್ಳುವನೋ? ಮತ್ತು ಪತ್ನಿಯನ್ನೂ ಪುತ್ರನನ್ನೂ ಗುರುತಿಸಿದ ಮೇಲೆ ಅವನ ಎದೆಯು ಸೀಳಿ ಹೋಗದೋ ಎಂಬ ನಿರೀಕ್ಷಣೆಯಲ್ಲಿ ಶ್ರೋತೃಬಾಲಕರ ಮನಸ್ಸು ವಿಸ್ಮಯ ಸ್ತಬ್ಧವಾಗುವಂತೆ ಮಾಡಲಾಪರೆ? ತನಗೊದಗಿದ ಅಪಾಯಗಳನ್ನು ಧೈರ್ಯ ಸ್ಥೈರ್ಯಗಳಿಂದ ಜಯಿಸಿ ಪತ್ನೀ ಪುತ್ರಾದಿಗಳೊಡನೆ ಸೇರಿದಾಗ ಹರಿಶ್ಚಂದ್ರನಲ್ಲಿ ಜನಿಸಿದ ಆನಂದವನ್ನು ಶ್ರೋತೃಬಾಲಕರಲ್ಲಿ ಆತನಿಗಿಂತ ಹತ್ತುಪಾಲು ಹೆಚ್ಚಾಗಿ ಹುಟ್ಟಿಸಿ ಆನಂದ ಪಾರವಶ್ಯದಿಂದ ಕುಣಿಯಿಸ ಬಲ್ಲರೆ? ಇಷ್ಟರ ಮೇಲೆ "ಹರಿಶ್ಚಂದ್ರನು ಎಂಥ ಮಹಿಮನು, ಅವನಂತೆ ಹಸ್ತಪಾದಗಳುಳ್ಳ ನಾವು ಏಕೆ ಅವನಂತೆ ಆಗಬಾರದು? ಯತ್ನಿಸಿದರೆ ಆಗದೆ ಏನು? ವಿಶ್ವಾಮಿತ್ರನೂ ಮಹಾತ್ಮನು, ಯೋಗ್ಯನು, ಯೋಚಿಸಿದರೆ ವಸಿಷ್ಠನಿಗಿಂತಲೂ ಅಧಿಕಮಾನಾರ್ಹನು, ಹರಿಶ್ಚಂದ್ರನಿಗೆ ಅಧಿಕಾಪ್ತನು, ವಿಶ್ವಾಮಿತ್ರನು ಅಷ್ಟು ಕಷ್ಟಗಳನ್ನು ಕೊಡದಿದ್ದರೆ ಹರಿಶ್ಚಂದ್ರನ ಯೋಗ್ಯತೆಯು ಹೊರಬೀಳುತ್ತಿತ್ತೆ? ಅಂಥ ಅತ್ಯುಚ್ಛ್ರಾಯದ ಶ್ರೇಯಸ್ಸೂ ಲಭಿಸುತ್ತಿತ್ತೇ? ರಾಜಭೋಗಕ್ಕಿಂತ ಬಹುಭಾಗದಲ್ಲಿ ಮೇಲಾದ ತಪೋಭೋಗವನ್ನು ವಿಶ್ವಾಮಿತ್ರನಲ್ಲದೆ ಬೇರೆ ಯಾವನು ದಾನ ಮಾಡುತ್ತಿದ್ದನು? ಹರಿಶ್ಚಂದ್ರನಂತೆ ನಾವೂ ಸಚ್ಛೀಲವ್ರತವನ್ನು ಕೈಕೊಳ್ಳೋಣ; ನಮ್ಮ ವ್ರತಕ್ಕೆ ಭಂಗಸಂಭವಿಸಿದರೆ ಮಹಾತ್ಮರ ಸಹಾಯದಿಂದ ಏಕೆಪಾರಾಗಬಾರದು? ಒಂದುವೇಳೆ ನಮ್ಮ ವ್ರತವು ಭಗ್ನವಾದರೂ ನಮ್ಮ ಸ್ಥಿತಿಯು ಉತ್ತಮೋತ್ತಮವಾಗುವುದರಲ್ಲಿ ಸಂಶಯವಿಲ್ಲ." ಎಂದು ಧೈರ್ಯದಿಂದೊಡಗೂಡಿದ ಸದ್ಧರ್ಮಪ್ರವರ್ತನೆಯೂ ಶ್ರೋತೃಬಾಲಕರಲ್ಲಿ ಹುಟ್ಟಲು ಅಡಿಯೇನು? ಈಗಲೂ ನಮ್ಮಲ್ಲಿ ಅನೇಕ ಸ್ತ್ರೀಯರು ಜಾನಕಿಯ ಚರಿತ್ರೆಯನ್ನು ಕೇಳಿ ಸಂಸಾರದ ಕಷ್ಟವನ್ನು ಸಹಿಸಿಕೊಂಡಿಲ್ಲವೆ? ಪುತ್ರಮಿತ್ರಕಳತ್ರಾದಿಗಳ ವಿಯೋಗದಲ್ಲಿಯೂ ಬಡತನದ ಕೋಟಲೆಯಲ್ಲಿಯೂ ಕವಿಗಳು ತಿಳಿಸಿದ ಹಿಂದಣ ಮಹಾತ್ಮರನ್ನು

ನೋಡಿಕೊಂಡು ಎದೆಗುಂದದೆ ಇರುವವರು ಈಗಲೂ ನಮ್ಮಲ್ಲಿ ಎಷ್ಟು ಮಂದಿ ಇಲ್ಲ? ಭೀಷ್ಮನಂತೆಯೂ ಅಭಿಮನ್ಯುವಿನಂತೆಯೂ ಇರಬೇಕೆಂಬ ಆಶೆಯು ಎಷ್ಟು ಮಂದಿಗಳನ್ನು ಪ್ರೇರಿಸುತ್ತಿಲ್ಲ? ಮುಸಲ್ಮಾನನಾದ ಹೈದರಲ್ಲಿಯೂ ಕೂಡ ಭಾರತ ಯುದ್ಧವನ್ನು ಕೇಳಿ "ಏಕ್ ಛೋಕ್ರ, ಏಕ್ ಬುಡ್ಡ," ಎಂದು ಹೊಗಳಿ ತಲೆದೂಗಿದನೆಂದು ಕೇಳಿದ್ದೇವೆ. ಕುಂತಿಯಂತೆ ಪುತ್ರರ ಶ್ರೇಯಸ್ಸಿನಲ್ಲಿ ಬುದ್ಧಿಯಿಟ್ಟು ವೈಧವ್ಯದುಃಖವನ್ನು ಸಹಿಸಿಕೊಂಡು ಪ್ರವರ್ತಿಸುವವರು ಎಷ್ಟು ಸ್ತ್ರೀಯರು ಇಲ್ಲ? ಝಾಂಸಿ ಮಹಾರಾಣಿಯು ಚರಿತ್ರವನ್ನು ಕೇಳಿರುವಿರಿ. ಇವೆಲ್ಲವೂ ಕವಿಗಳು ನಿರೂಪಿಸುವ ಮಹಾತ್ಮರ ಚರಿತ್ರೆಗಳ ಶ್ರವಣಪಠನಗಳಿಂದ ಹುಟ್ಟಿದುವಲ್ಲವೆ? ಇಂಥ ಸಾಮರ್ಥ್ಯವು ಮತ್ತು ಯಾರಲ್ಲಿ ಕಂಡು ಬರುವುದು?

ಏವಂಚ ಕವಿಗಳ ಬೋಧನಾಕ್ರಮವು ವಿಜಾತೀಯವಾಗಿರುವುದು. ಬಾಲಕರ ಮನಸ್ಸೆಂಬ ನೆಲವನ್ನು ಗಮನವೆಂಬ ನೇಗಿಲಿನಿಂದ ಬಹುಕಾಲ ಅಗೆದು ಅಗೆದು ಅಗತೆಮಾಡಿ ಆಲಸ್ಯ, ಗ್ಲಾನಿ, ಜುಗುಪ್ಸೆಗಳೆಂಬ ಕಲ್ಲುಗಳನ್ನು ಆರಿಸಿ ತೆಗೆದು ಹಾಕಿ ನವರಸಗಳೆಂಬ ನೀರಿನಿಂದ ಸೇಚನೆಮಾಡಿ, ಲೋಕಸ್ಥಿತಿನಿರೂಪಣವೆಂಬ ಗೊಬ್ಬರವನ್ನು ಮೇಲೆ ಎರಚಿ, ಮಾತಿನ ಸೊಗಸೆಂಬ ಸಲಾಕೆಗಳಿಂದ ಚೆನ್ನಾಗಿ ಆಗಾಗ್ಗೆ ಕೆದರಿ, ಸಚ್ಛೀಲಪ್ರವರ್ತನವೆಂಬ ಬೀಜವನ್ನು ಮಹಾತ್ಮರ ಚರಿತ್ರವೆಂಬ ಆಧಾರದಲ್ಲಿ ತಂದು ನೆಟ್ಟು, ಆ ಬೀಜವು ಮೊಳಕೆ ಬಿಟ್ಟು ಸಸಿಯಾಗಿ ಸೊಂಪಾಗಿ ಬೆಳೆಯುವವುದಕ್ಕೋಸ್ಕರ "ಆಹಾ! ಇದು ನಮ್ಮ ಅನುಭವವೇ ಆಗಿರುವುದು. ನಮ್ಮಂತೆಯೇ ಇತರರೂ ಅನುಭವಿಸುವರು. ಈ ಅನುಭವವೇ ನಿಜವಾದದ್ದು" ಎಂಬ ವಿಶ್ವಾಸ ಆದರಗಳೆಂಬ ಗಾಳಿಬಿಸಿಲುಗಳು ಬೀಳುವ ಅವಕಾಶವನ್ನು ಹುಟ್ಟಿಸಿ, ಅದು ಬೆಳೆದು ಜೀವಮಾನದ ಆದಿಭಾಗವೆಂಬ ಬಾಲ್ಯದಲ್ಲಿ ಚನ್ನಾಗಿ ಬೇರೂರಿ ದೃಢವಾಗಿ ನಿಲ್ಲುವಂತೆಯೂ, ಮುಂದೆ ಜೀವಮಾನದ ಮಧ್ಯ ಮತ್ತು ಅಂತ್ಯಭಾಗಗಳಲ್ಲಿ ವೃಕ್ಷವಾಗಿ ಬೆಳೆದು ಸಮೃದ್ಧಿಯಾಗಿ ಸ್ವಾದುಫಲ ಬಿಡುವಂತೆಯೂ ಮಾಡುವ ಚಾತುರ್ಯವುಳ್ಳ ಒಂದು ಬಗೆಯ ತೋಟಗಾರರೇ ಕವಿಗಳು. ಹೀಗೆಂದ ಮೇಲೆ ಕವಿಗಳ ಕಾರ್ಯವು ವಿಫಲವಾಗುವದೂ ಉಂಟೋ? ಕವಿಗಳ ಬೋಧನಾ ಪ್ರಕಾರಕ್ಕೂ ನೀತಿಕಾರರೇ ಮೊದಲಾದ ಇತರ ಮಹೋಪಕಾರಿಗಳ ಪ್ರವೃತ್ತಿಗೂ ತಾರತಮ್ಯವನ್ನು ನೀವೇ ಯೋಚಿಸಿ. ಕವಿಯೆಂಬ ಗರುಡನ ಮುಂದೆ ಹಿತೈಷಿಗಳೆಂಬ ಗುಬ್ಬಿಗಳು ಆಡುವುವೆ?

---

ಕೇಳಿ ಹರಿಶ್ಚಂದ್ರನ ಎದೆಯು ಹೇಗೆ ತಲ್ಲಣಿಸಿ ಹೋಯಿತೋ ಹಾಗೆ ಬಾಲಕರ ಎದೆಯನ್ನು ತಲ್ಲಣಿಸಬಲ್ಲರೆ? "ವಿಶ್ವಾಮಿತ್ರನು ಏನೇನು ಕಷ್ಟಗಳನ್ನು ಕೊಡುವನೋ ನೋಡುವೆನು; ಸತ್ಯವನ್ನೂ ಧರ್ಮವನ್ನೂ ಕಾಪಾಡಲಾರದೆ ಹೋದೇನೇ?" ಎಂಬ ಹರಿಶ್ಚಂದ್ರನ ಕೆಚ್ಚನ್ನು ಬಾಲಕರಲ್ಲಿ ಹುಟ್ಟಿಸಬಲ್ಲರೆ? ಕೊನೆಗೆ ಚಂದ್ರಮತಿಯು ಸತ್ತ ಮಗನನ್ನು ಮಸಣಗಾಡಿನಲ್ಲಿ ಹಾಕಿಕೊಂಡು ಭೂತಗಳಿಗೂ ಕೂಡ ಎದೆ ಕರಗುವಂತೆ ರೋದನ ಮಾಡುತ್ತ ಕಣ್ಣೀರನ್ನು ಧಾರೆಧಾರೆಯಾಗಿ ಸುರಿಸುತ್ತ ತನ್ನ ಪೂರ್ವ ಸ್ಥಿತಿಯನ್ನು ನೆನೆಸಿಕೊಂಡು ಹಂಬಲಿಸುತ್ತಾ "ಮಸಣದ ಕಾವಲವನು ನೆಲಹಾಗವನ್ನು ಕೇಳಿದರೆ ಎಲ್ಲಿಂದ ಕೊಡಲಿ, ಯಾರಲ್ಲಿ ಬೇಡಲಿ, ಅಯ್ಯೋ ಹರಿಶ್ಚಂದ್ರನೇ" ಎಂದು ಪ್ರಲಾಪಿಸುತ್ತಿರುವುದನ್ನು ಕೇಳಿ ಹರಿಶ್ಚಂದ್ರನು ಅವಳಿಂದ ನೆಲಹಾಗವನ್ನು ತೆಗೆದುಕೊಂಡು ತನ್ನ ಕರ್ತವ್ಯವನ್ನು ಕಾಪಾಡುವನೋ ಇಲ್ಲವೆ ವಿಶ್ವಾಮಿತ್ರನ ಮಾಯೆಗೆ ಸಿಕ್ಕಿ ತನ್ನ ಸತ್ವಯನ್ನು ಕಳೆದುಕೊಳ್ಳುವನೋ? ಮತ್ತು ಪತ್ನಿಯನ್ನೂ ಪುತ್ರನನ್ನೂ ಗುರುತಿಸಿದ ಮೇಲೆ ಅವನ ಎದೆಯು ಸೀಳಿ ಹೋಗದೋ ಎಂಬ ನಿರೀಕ್ಷಣೆಯಲ್ಲಿ ಶ್ರೋತೃಬಾಲಕರ ಮನಸ್ಸು ವಿಸ್ಮಯ ಸ್ತಬ್ಧವಾಗುವಂತೆ ಮಾಡಲಾಪರೆ? ತನಗೊದಗಿದ ಅಪಾಯಗಳನ್ನು ಧೈರ್ಯ ಸ್ಥೈರ್ಯಗಳಿಂದ ಜಯಿಸಿ ಪತ್ನೀಪುತ್ರಾದಿಗಳೊಡನೆ ಸೇರಿದಾಗ ಹರಿಶ್ಚಂದ್ರನಲ್ಲಿ ಜನಿಸಿದ ಆನಂದವನ್ನು ಶ್ರೋತೃಬಾಲಕರಲ್ಲಿ ಆತನಿಗಿಂತ ಹತ್ತುಪಾಲು ಹೆಚ್ಚಾಗಿ ಹುಟ್ಟಿಸಿ ಆನಂದ ಪಾರವಶ್ಯದಿಂದ ಕುಣಿಯಿಸ ಬಲ್ಲರೆ? ಇಷ್ಟರ ಮೇಲೆ "ಹರಿಶ್ಚಂದ್ರನು ಎಂಥ ಮಹಿಮನು, ಅವನಂತೆ ಹಸ್ತಪಾದಗಳುಳ್ಳ ನಾವು ಏಕೆ ಅವನಂತೆ ಆಗಬಾರದು? ಯತ್ನಿಸಿದರೆ ಆಗದೆ ಏನು? ವಿಶ್ವಾಮಿತ್ರನೂ ಮಹಾತ್ಮನು, ಯೋಗ್ಯನು, ಯೋಚಿಸಿದರೆ ವಸಿಷ್ಠನಿಗಿಂತಲೂ ಅಧಿಕಮಾನಾರ್ಹನು, ಹರಿಶ್ಚಂದ್ರನಿಗೆ ಆಧಿಕಾಪ್ತನು, ವಿಶ್ವಾಮಿತ್ರನು ಅಷ್ಟು ಕಷ್ಟಗಳನ್ನು ಕೊಡದಿದ್ದರೆ ಹರಿಶ್ಚಂದ್ರನ ಯೋಗ್ಯತೆಯು ಹೊರಬೀಳುತ್ತಿತ್ತೆ? ಅಂಥ ಅತ್ಯುಚ್ಛ್ರಾಯದ ಶ್ರೇಯಸ್ಸೂ ಲಭಿಸುತ್ತಿತ್ತೇ? ರಾಜಭೋಗಕ್ಕಿಂತ ಬಹುಭಾಗದಲ್ಲಿ ಮೇಲಾದ ತಪೋಭೋಗವನ್ನು ವಿಶ್ವಾಮಿತ್ರನಲ್ಲದೆ ಬೇರೆ ಯಾವನು ದಾನ ಮಾಡುತ್ತಿದ್ದನು? ಹರಿಶ್ಚಂದ್ರನಂತೆ ನಾವೂ ಸಚ್ಛೀಲವ್ರತವನ್ನು ಕೈಕೊಳ್ಳೋಣ; ನಮ್ಮ ವ್ರತಕ್ಕೆ ಭಂಗಸಂಭವಿಸಿದರೆ ಮಹಾತ್ಮರ ಸಹಾಯದಿಂದ ಏಕೆಪಾರಾಗಬಾರದು? ಒಂದುವೇಳೆ ನಮ್ಮ ವ್ರತವು ಭಗ್ನವಾದರೂ ನಮ್ಮ ಸ್ಥಿತಿಯು ಉತ್ತಮೋತ್ತಮವಾಗುವುದರಲ್ಲಿ ಸಂಶಯವಿಲ್ಲ." ಎಂದು ಧೈರ್ಯದಿಂದೊಡಗೂಡಿದ ಸದ್ಧರ್ಮಪ್ರವರ್ತನೆಯೂ ಶ್ರೋತೃಬಾಲಕರಲ್ಲಿ ಹುಟ್ಟಲು ಅಡಿಯೇನು? ಈಗಲೂ ನಮ್ಮಲ್ಲಿ ಅನೇಕ ಸ್ತ್ರೀಯರು ಜಾನಕಿಯ ಚರಿತ್ರೆಯನ್ನು ಕೇಳಿ ಸಂಸಾರದ ಕಷ್ಟವನ್ನು ಸಹಿಸಿಕೊಂಡಿಲ್ಲವೆ? ಪುತ್ರಮಿತ್ರಕಳತ್ರಾದಿಗಳ ವಿಯೋಗದಲ್ಲಿಯೂ ಬಡತನದ ಕೋಟಲೆಯಲ್ಲಿಯೂ ಕವಿಗಳು ತಿಳಿಸಿದ ಹಿಂದಣ ಮಹಾತ್ಮರನ್ನು

ನೋಡಿಕೊಂಡು ಎದೆಗುಂದದೆ ಇರುವರು ಈಗಲೂ ನಮ್ಮಲ್ಲಿ ಎಷ್ಟು ಮಂದಿ ಇಲ್ಲ? ಭೀಷ್ಮನಂತೆಯೂ ಅಭಿಮನ್ಯುವಿನಂತೆಯೂ ಇರಬೇಕೆಂಬ ಆಶೆಯು ಎಷ್ಟು ಮಂದಿಗಳನ್ನು ಪ್ರೇರಿಸುತ್ತಿಲ್ಲ? ಮುಸಲ್ಮಾನನಾದ ಹೈದರಲ್ಲಿಯೂ ಕೂಡ ಭಾರತ ಯುದ್ಧವನ್ನು ಕೇಳಿ "ಏಕ್ ಛೋಕ್ರ, ಏಕ್ ಬುಡ್ಡ," ಎಂದು ಹೊಗಳಿ ತಲೆದೂಗಿದನೆಂದು ಕೇಳಿದ್ದೇವೆ. ಕುಂತಿಯಂತೆ ಪುತ್ರರ ಶ್ರೇಯಸ್ಸಿನಲ್ಲಿ ಬುದ್ಧಿಯಿಟ್ಟು ವೈಧವ್ಯದು:ಖವನ್ನು ಸಹಿಸಿಕೊಂಡು ಪ್ರವರ್ತಿಸುವವರು ಎಷ್ಟು ಸ್ತ್ರೀಯರು ಇಲ್ಲ? ಝಾಂಸಿ ಮಹಾರಾಣಿಯ ಚರಿತ್ರವನ್ನು ಕೇಳಿರುವಿರಿ. ಇವೆಲ್ಲವೂ ಕವಿಗಳು ನಿರೂಪಿಸುವ ಮಹಾತ್ಮರ ಚರಿತ್ರೆಗಳ ಶ್ರವಣಪಠನಗಳಿಂದ ಹುಟ್ಟಿದುವಲ್ಲವೆ? ಇಂಥ ಸಾಮರ್ಥ್ಯವು ಮತ್ತು ಯಾರಲ್ಲಿ ಕಂಡು ಬರುವುದು?

ಏವಂಚ ಕವಿಗಳ ಬೋಧನಾಕ್ರಮವು ವಿಜಾತೀಯವಾಗಿರುವುದು. ಬಾಲಕರ ಮನಸ್ಸೆಂಬ ನೆಲವನ್ನು ಗಮನವೆಂಬ ನೇಗಿಲಿನಿಂದ ಬಹುಕಾಲ ಅಗೆದು ಅಗೆದು ಅಗತೆಮಾಡಿ ಆಲಸ್ಯ, ಗ್ಲಾನಿ, ಜುಗುಪ್ಸೆಗಳೆಂಬ ಕಲ್ಲುಗಳನ್ನು ಆರಿಸಿ ತೆಗೆದು ಹಾಕಿ ನವರಸಗಳೆಂಬ ನೀರಿನಿಂದ ಸೇಚನೆಮಾಡಿ, ಲೋಕಸ್ಥಿತಿ ನಿರೂಪಣವೆಂಬ ಗೊಬ್ಬರವನ್ನು ಮೇಲೆ ಎರಚಿ, ಮಾತಿನ ಸೊಗಸೆಂಬ ಸಲಾಕೆಗಳಿಂದ ಚೆನ್ನಾಗಿ ಆಗಾಗ್ಗೆ ಕೆದರಿ, ಸಚ್ಛೀಲಪ್ರವರ್ತನವೆಂಬ ಬೀಜವನ್ನು ಮಹಾತ್ಮರ ಚರಿತ್ರವೆಂಬ ಆಧಾರದಲ್ಲಿ ತಂದು ನೆಟ್ಟು, ಆ ಬೀಜವು ಮೊಳಕೆ ಬಿಟ್ಟು ಸಸಿಯಾಗಿ ಸೊಂಪಾಗಿ ಬೆಳೆಯುವವುದಕ್ಕೋಸ್ಕರ "ಆಹಾ! ಇದು ನಮ್ಮ ಅನುಭವವೇ ಆಗಿರುವುದು. ನಮ್ಮಂತೆಯೇ ಇತರರೂ ಅನುಭವಿಸುವರು. ಈ ಅನುಭವವೇ ನಿಜವಾದದ್ದು" ಎಂಬ ವಿಶ್ವಾಸ ಆದರಗಳೆಂಬ ಗಾಳಿಬಿಸಿಲುಗಳು ಬೀಳುವ ಅವಕಾಶವನ್ನು ಹುಟ್ಟಿಸಿ, ಅದು ಬೆಳೆದು ಜೀವಮಾನದ ಆದಿಭಾಗವೆಂಬ ಬಾಲ್ಯದಲ್ಲಿ ಚೆನ್ನಾಗಿ ಬೇರೂರಿ ದೃಢವಾಗಿ ನಿಲ್ಲುವಂತೆಯೂ, ಮುಂದೆ ಜೀವಮಾನದ ಮಧ್ಯ ಮತ್ತು ಅಂತ್ಯಭಾಗಗಳಲ್ಲಿ ವೃಕ್ಷವಾಗಿ ಬೆಳೆದು ಸಮೃದ್ಧಿಯಾಗಿ ಸ್ವಾದು ಫಲ ಬಿಡುವಂತೆಯೂ ಮಾಡುವ ಚಾತುರ್ಯವುಳ್ಳ ಒಂದು ಬಗೆಯ ತೋಟಗಾರರೇ ಕವಿಗಳು. ಹೀಗೆಂದ ಮೇಲೆ ಕವಿಗಳ ಕಾರ್ಯವು ವಿಫಲವಾಗುವದೂ ಉಂಟೋ? ಕವಿಗಳ ಬೋಧನಾ ಪ್ರಕಾರಕ್ಕೂ ನೀತಿಕಾರರೇ ಮೊದಲಾದ ಇತರ ಮಹೋಪಕಾರಿಗಳ ಪ್ರವೃತ್ತಿಗೂ ತಾರತಮ್ಯವನ್ನು ನೀವೇ ಯೋಚಿಸಿ. ಕವಿಯೆಂಬ ಗರುಡನ ಮುಂದೆ ಹಿತೈಷಿಗಳೆಂಬ ಗುಬ್ಬಿಗಳು ಆಡುವುವೆ?